❋ ಸಮಾಜ ಪುಸ್ತಕಮಾಲೆ ಧಾರವಾಡ ❋

# ಮನೆಯ ಸುಖ ಶಾಂತಿ

( ಮಹರ್ಷಿ ಟಾಲ್‌ಸ್ಟಾಯ್ ಅವರ ಕಾದಂಬರಿ )

ಅನುವಾದಕರು :

ಹ. ಪಿ. ಜೋಶಿ ಬಿ. ಎ.





ಹನ್ನೆರಡಾಣೆ

# ಪ್ರಕಾಶಕರ ನುಡಿ

ನಮ್ಮ ಸಮಾಜ ಪುಸ್ತಕ ಮಾಲೆಯು ವಿವಿಧ ರೀತಿಯಿಂದ ಸಾಹಿತ್ಯ ಸೇವೆಯನ್ನು ಮಾಡುತ್ತಲಿರುವದು ಕನ್ನಡಿಗರಿಗೆ ಪರಿಚಿತವಾದ ವಿಷಯವೇ ಆಗಿದೆ. ಒಂದು ವರ್ಷದಲ್ಲಿ ಕಾಮ ವಿಜ್ಞಾನದ ಮೇಲೆ ಎರಡು ಗ್ರಂಥಗಳು ಪ್ರಕಟವಾದವು; ಶರತ್ ಬಾಬುಗಳ ಕೆಲವು ಪುಟ್ಟ ಕಾದಂಬರಿಗಳು ಪ್ರಕಟ ವಾದವು; ಸಾಮುದ್ರಿಕ ಶಾಸ್ತ್ರವನ್ನು ಕುರಿತು ಒಂದು ಗ್ರಂಥವು ಪ್ರಕಟ ವಾಯಿತು; ಇದೀಗ ಈ ಕಾದಂಬರಿಯನ್ನು ಪ್ರಕಟಿಸುವ ಕಾರ್ಯವನ್ನು ಪೂರ್ತಿಗೊಳಿಸಿದ್ದೇವೆ. ಕನ್ನಡಿಗರಿಂದ ಸತತವೂ ಪ್ರೋತ್ಸಾಹನವು ದೊರೆ ಯುತ್ತ ಬಂದರೆ ಇನ್ನೂ ಹೆಚ್ಚಿನ ಪ್ರಕಟನಾ ಕಾರ್ಯಗಳನ್ನು ನೆರವೇರಿಸ ಬೇಕೆಂದು ನಮ್ಮ ಅಪೇಕ್ಷೆಯಿದೆ.

ಇದೀಗ ಕನ್ನಡಿಗರಿಗೆ ಅರ್ಪಿಸುತ್ತಿರುವ ಈ ಕಾದಂಬರಿಯ ಬಗ್ಗೆ ಹೆಚ್ಚಾಗಿ ಬರೆಯುವ ಕಾರಣವಿಲ್ಲ. ಮಹರ್ಷಿಟಾಲಸ್ಟಾಯ್ ಅವರ ಕಥೆ— ಕಾದಂಬರಿಗಳು ಜಗಮಾನ್ಯವೇ ಆದವುಗಳಿವೆ. ಅದೇ ರೀತಿ ಇದನ್ನು ಕನ್ನಡಿ ಸಿದ **ಶ್ರೀ. ಹ. ಪಿ. ಜೋಶಿಯವರ** ಬರೆವಣಿಗೆಯು ಕೂಡ ಕನ್ನಡಿಗರಿಗೆ ಗೊತ್ತಿದ್ದ ವಿಷಯ, ಅನೇಕ ಪುಸ್ತಕಗಳನ್ನು ಬರೆದು ಅವರು ಕೀರ್ತಿಯನ್ನು ಪಡೆದವರಾಗಿದ್ದಾರೆ. **ಶ್ರೀ. ಹ. ಪಿ. ಜೋಶಿಯವರು** ನಮ್ಮ ಸಮಾಜ ಪುಸ್ತಕ ಮಾಲೆಯ ಬಿನ್ನಹವನ್ನಾದರೂ ಮನ್ನಿಸಿ ಈ ಉತ್ತಮ ಕಾದಂಬರಿ ಯನ್ನು ಅನುವಾದಿಸಿ ಕೊಟ್ಟುದಕ್ಕಾಗಿ ನಾವು ಅವರಿಗೆ ಚಿರಋಣಿಯಾಗಿದ್ದೇವೆ.

**ಭಾಲಚಂದ್ರ ಘಾಣೇಕರ.**

---

ಪ್ರಕಾಶಕರು :—
**ಭಾಲಚಂದ್ರ ಘಾಣೇಕರ**
ಸಮಾಜ ಪುಸ್ತಕ ಮಾಲೆ
ಧಾರವಾಡ.

ಮುದ್ರಕರು:
**ರಾ. ಶ್ರೀ. ಮುಕ್ಕೇರಿಕರ.**
ವಸಂತ ಮುದ್ರಣಾಲಯ
ಧಾರವಾಡ.

# ಪೀಠಿಕೆ

" ಮೊದಮೊದಲು ಪೀಟರ್ಸ್‌ಬರ್ಗು ನನ್ನ ಮನೋಭಂಗ ಮಾಡಿತು— ನನ್ನನ್ನು ಹಾದಿಗೂ ತಂದಿತು. ನನ್ನ ಮರ್ಯಾದೆ ಮಣ್ಣು ಪಾಲಾಯಿತು— ಕಾಯ್‌ಕುಯ್ ಎನ್ನದಷ್ಟು. ಈಗ ನನಗೆ ಸಮಾಧಾನ. ನನ್ನಲ್ಲಿ ಏನಾದರೂ ಜನರಿಗೆ ಹೇಳಲೆ ಬೇಕಾದುದಿದ್ದರೆ ನಾನೂ ಹೇಳ ಬಲ್ಲೆ. ಆ ಮೇಲೆ ಅವರು ಹೊಗಳಲಿ, ತೆಗಳಲಿ. ನಾನಂತೂ ವಿವೇಕವನ್ನು ನೆನೆದು ದುಡಿಯ ಬೇಕು— ನನ್ನ ಶಕ್ತಿಸರ್ವಸ್ವವನ್ನಣಿಮಾಡಿ. ಆ ನಂತರ........ಅವರು ಬೇಕಿದ್ದರೆ ಆ ವೇದಿಯ ಮೇಲೆ ಉಗುಳಲಿ."

—ಟಾಲ್‌ಸ್ಟಾಯ ಅವರ ದಿನಚರಿ (೧೮೫೭) 1969

ಆಗ ಟಾಲ್‌ಸ್ಟಾಯ್ ಅವರು ಪೀಟರ್ಸ್ ಬರ್ಗಿನಲ್ಲಿ ಕಳೆದ ಕಾಲಖಂಡವು (೧೮೫೭) ಉದ್ವೇಗಕರವೆ ಆದಂತೆ ತೋರುತ್ತದೆ. ಪರಿಚಯಸ್ಥರಲ್ಲೂ ಪರಕೀಯರಲ್ಲೂ ಅವರ ಬಗೆಗೂಅವರ ಲೇಖನದ ಬಗೆಗೂ ಆದರದ ಔಚಿತ್ಯವಿರಲಿಲ್ಲ, ರೀತಿಯ ವಿಶ್ವಾಸವಿರಲಿಲ್ಲ. ಆಗಲೆ ಅವರ ಲೇಖನವು ( artistic influence ) ಕಲಾನುಭೂತಿಯ ಆವಿಗೆಯಲ್ಲಿ ರೂಪು ಒಪ್ಪು ಹೊಂದಲಾರಂಭಿಸಿತ್ತು. ಅವರು ಬೇರೆ ಬೇರೆ ಶೈಲಿಗಳಲ್ಲಿ ಬೇರೆ ಬೇರೆ ಸಾಹಿತ್ಯಪ್ರಕಾರಗಳನ್ನು ಬಳಸತೊಡಗಿದ್ದರು. ಕತೆಗಳೊ ಕಾದಂಬರಿಗಳೊ ಪ್ರಬಂಧಗಳೊ ನಾಟಕಗಳೊ ಹೀಗೆ ಒಂದರ ಹಿಂದೆ ಒಂದು ಗೋಪುರ ಗೋಪುರವಾಗಿ ಮೊಳಗತೊಡಗಿದುವು. ಅವರ ಕತೆಗಳೊ ಚಿಕ್ಕ ಚಿಕ್ಕ ಕಾದಂಬರಿಗಳೆ ಆಗಿವೆ. Family Happiness (ಮನೆಯ ಸುಖಶಾಂತಿ). Polikushka (ಪೋಲಿಕುಷ್ಕಾ) ಮುಂತಾದ ಕೃತಿಗಳು ಅವರ ಲೇಖನದಲ್ಲಿನ ಕಲಾನುಭೂತಿಯ ಪ್ರತೀತಿ ಕೊಡುವುವು. ಆ ಮೇಲೆ ಅವರ ವೃತ್ತಿ ತತ್ವಚಿಂತನೆಗೆ ಅನುವು ಕೊಟ್ಟಂತಾಯಿತು. War and Peace (ಯುದ್ಧ ಮತ್ತು ಶಾಂತಿ), Anna Karenine (ಅನಾ

ಕ್ಯಾರೆನಿನ) Cossacks (ಕೊಸ್ಸಾಕ್ಸ್), Resurrection (ರಿಸರೆಕ್ಶನ್) ಮುಂತಾದ ಅವರ ಕಾದಂಬರಿಗಳಲ್ಲಿ ಸಂವಿಧಾನಕಗಳ ಚಮತ್ಕೃತಿಯಿಲ್ಲವಾದರೂ ಅಲ್ಲಿನ ಪಾತ್ರವಿಶೇಷಗಳ ಮನಸಿನ ಗತಿವಾನ ಆಯಾ ಕಾಲದ ಸಮಾಜದರ್ಶನ ಮುಂತಾದವುಗಳಲ್ಲಿಯೆ ಓದುಗರ ಮನಸು ನಲಿಯುವುದು. ಮುಂದೆ ೨೩ ವರ್ಷಗಳ ನಂತರ ಮತ್ತೆ ಕಥಾ ಪ್ರಕಾರವನ್ನು ಬಳಕೆಗೆ ತಂದರೇನೊ ನಿಜ. ಆದರೆ ಆ ಮೊದಲಿನ ಮಿಂಚುಮಾಯವಿರಲಿಲ್ಲ ಆ ಶೈಲಿಯಲ್ಲಿ.

ವೈವಾಹಿಕ ಜೀವನದಲ್ಲಿ ಬರುವ ಸೂಕ್ಷ್ಮ ಸಮಸ್ಯೆಗಳನ್ನು ಟಾಲ್ ಸ್ಟಾಯ ಅವರು Family Happiness, Anna Karenine Krutzer Sonata. ಎಂಬ ಕಾದಂಬರಿಗಳಲ್ಲಿ ಬೇರೆ ಬೇರೆಯಾಗಿ ವಿವರಿಸಿದ್ದಾರೆ. ಗಂಡ ಹೆಂಡಿರಲ್ಲಿ ಮಾನಸಿಕ ವಿಷಮತೆ — ವಯಸ್ಸು. ಶಿಕ್ಷಣ, ಸಂಸ್ಕಾರ, ಸ್ವಭಾವವಿಶೇಷಗಳ ಭಿನ್ನತೆಯ ಮೂಲಕ— ಇರುವುದುಂಟು. ಗಂಡನು ತನ್ನ ಹೆಂಡತಿಯ ಸುಖದುಃಖ ಭಾವಭಾವನೆಗಳಲ್ಲಿ ಬೆರೆಯದೆ ತನ್ನ ಸ್ವಭಾವವಿಶೇಷಗಳಿಗೇ ಮೀಸಲಾದ ಜಗತ್ತನ್ನು ನೋಡಬಯಸಿದರೆ ಆಕೆಯ ಗತಿಯೇನು ? ಗಂಡನು ಹೆಂಡತಿಯ ಸುಖಸೌಕರ್ಯಗಳನ್ನೊಮ್ಮೆ ಒದಗಿಸಿದರಾಯಿತು, ತಾನು ಎಲ್ಲಿಯಾದರೂ ಹೇಗಾದರೂ ಕಾಲ ಕಳೆಯಲೊಲ್ಲನೇಕೆ ತಾವಂತೂ ಅರಿಯದವರು ಎಂದು ಹೇಳುವ ಹೆಂಡಂದಿರನ್ನೂ ಕಾಣುವುದುಂಟು. ಆ ಮೇಲೆ ಅತಿಚಾರವೊ ಮರುಕವೊ ಕಟ್ಟಿಟ್ಟದ್ದು—ಮಕ್ಕಳು ಮರಿ, ಮಾನ ಮರ್ಯಾದೆ ತೊರೆದು ನಿಲ್ಲುವುದೆ ಒಂದು ಫಲ. Family Happiness ನಲ್ಲಿ ಮಾಷಳ ಮನಶ್ಚಾಂಚಲ್ಯಕ್ಕೆ ಮದ್ದು ಮಾಡಬಲ್ಲ ಮಹಾಮಂತ್ರವೆಂದರೆ ಆಕೆಯ ಮಕ್ಕಳು. ವೈವಾಹಿಕ ಬಂಧನದಾಚೆ ಅಡಿಯಿಡಬೇಕೆಂದವಳು ಹಿಂದೆ ತಿರುಗುವಳು—ತನ್ನ ಮನಕ್ಕೆ ತಾನೆ ಬುದ್ಧಿ ಹೇಳುವಳು—ಗಂಡನಿಗೊ ಯಾವ ಮಾತಿನ ಸುಳುವೂ ಹತ್ತುವ ಕಾರಣವಿಲ್ಲ. ಆಗಂತುಕವಾಗಿ ಬಂದ ಮೋಡವು ಗಾಳಿಗೆ ಚೆದರಿ ಹೋಯಿತು. Anna Karenine ದಲ್ಲಿನ ಘಟನೆ ಇದಕ್ಕೂ ಮುಂದುವರಿದದ್ದು. ರನ್‌ಸ್ಕಿ ಮತ್ತು ಅನಾ ಇವರ ಪ್ರೇಮ ಕಥೆಯನ್ನು ನೋಡಿಯೂ ನೋಡದಂತೆ ನಟಿಸುವನು ಅಲೆಕ್ಸಿ-ತನ್ನ ಮಾನ ಮರ್ಯಾದೆ ಉಳಿಸಿಕೊಳ್ಳುವುದಕ್ಕಾಗಿಯೊ ಮಗನ ಮನಸಿಗೆ

ಧಕ್ಕೆ ತಗಲಬಾರದೆಂತಲೊ. ಅಂತೂ ಸಾಗುವುದು ರನ್‌ಸ್ಕಿ ಆನಾ ಇವರ ಪ್ರೇಮಕಥೆ ತಡೆಯಿಲ್ಲದೆ ಈ ಪ್ರೇಮದ ಫಲವಾಗಿ ಸಂಭವಿಸಿದ ಹೆರಿಗೆಯ ಕಾಲ ಸಮೀಪಿಸಿದಾಗ ಆನಾ ತನ್ನ ಆಶೆ ಆಕಾಂಕ್ಷೆಗಳನ್ನೆಲ್ಲ ತೊರೆದು ಬಿಟ್ಟು ಕೇವಲ ರನ್‌ಸ್ಕಿ ಅಲೆಕ್ಷಿ ಅವರಲ್ಲಿ ವೈಮನಸ್ಯವುಳಿಯ ಬಾರದೆಂದು ಯತ್ನಿಸು ವಳು. ಕ್ಷಮಾಪಣೆಯಾಯಿತು–ಅಪರಾಧಿ (ರನ್‌ಸ್ಕಿ) ನ್ಯಾಯಾಧೀಶ (ಅಲೆಕ್ಷಿ) ಇಬ್ಬರ ಕಣ್ಣಲ್ಲಿ ನೀರು. ಕೈ ಕೈ ಕುಲಿಕಿದುವು. ಇದಕ್ಕೆ ಸಾಕ್ಷಿಯೊ, ಈಗಲೊ ಇನ್ನೊಂದು ಕ್ಷಣಕ್ಕೊ ಕಣ್ಮರೆ ಯಾಗತಕ್ಕ ಆನಾ! ಕಥೆ ಮುಗಿಯಿತೊ ?.... ಇಲ್ಲ........ಆನಾ ಸಾಯಲಿಲ್ಲ........ಆಕೆಯ ಅನುತಾಪ ಪ್ರಸೂತಿ ವೈರಾಗ್ಯ ವಾಯಿತು. ಮತ್ತೆ ರನ್‌ಸ್ಕಿಯ ಅನುನಯ........ಅಲೆಕ್ಷಿ........ಕ್ಷಣ ಹೊತ್ತು ಸತ್ಪುರುಷ ಮಾಲಿಕೆಯಲ್ಲಿ ಸೇರಿದವನು ಮತ್ತೆ ಪ್ರೇಮ ಮಾರ್ಗದಲ್ಲಿ ಆತಂಕ ತರುವ ಸೈತಾನನಾದನು. ರನ್‌ಸ್ಕಿಯ ಭ್ರಮರವೃತ್ತಿ ಆನಾಗೆ ಅಸಹ್ಯವೆನಿಸಿ ಕೊನೆಗೆ ಆಕೆ ಆತ್ಮಹತ್ಯೆಗೀಡಾಗುವಳು—ಅಲೆಕ್ಷಿಯ ಬಗೆಗೆ ಆದರ ಹುಟ್ಟಿ ದರೂ ರನ್‌ಸ್ಕಿ ಅಥವಾ ಆನಾ ಈ ಇಬ್ಬರ ಬಗೆಗೆ ತಿರಸ್ಕಾರವೆನಿಸಲಾರದು. Krutzer Sonata ದಲ್ಲಿ ಒಬ್ಬ ರೇಲ್ವೆ ಪ್ರವಾಸಿಗನು ಹೇಳಿದ ಆತ್ಮ ಕಥೆಯಿದೆ. ಆತನ ಹೆಂಡತಿ ಸಂಗೀತಶಿಕ್ಷಕನೊಂದಿಗೆ ನಡೆಸಿದ ಪ್ರೇಮ ಚೇಷ್ಟೆಗಳನ್ನು ನೋಡಿ ನೋಡಿ ನೊಂದು ಬೆಂದು ಆಕೆಯನ್ನು ದಂಡಿಸುವನು– ಕೊಲೆಗೀಡು ಮಾಡುವನು. ಘಟನೆಯೊದಗಿ ಎಷ್ಟೊ ಕಾಲವಾಗಿರಬೇಕು. ಆತನು ತನ್ನದೊ ಆಕೆಯದೊ ತಪ್ಪೊ ಒಪ್ಪೊ ಎಂಬುದನ್ನೆಣಿಸದೆ ಲೈಂಗಿಕ ಆಕರ್ಷಣೆ, ವೈವಾಹಿಕ ಜೀವನ, ವ್ಯಕ್ತಿ, ಸಮಾಜ ಮುಂತಾದ ತಾತ್ತ್ವಿಕ ಚರ್ಚೆಯಲ್ಲಿಯೆ ಕಥೆಯ ಓಘವನ್ನಡಗಿಸುವನು.

ಅಂತೂ ವೈವಾಹಿಕ ಜೀವನದ ಬಗೆಗೆ ಟಾಲ್‌ಸ್ಟಾಯ ಅವರ ಅಭಿ ಪ್ರಾಯವಾದರೂ ಏನಿದ್ದೀತೆಂಬುವನ್ನು ಮಾತ್ರ ನಿಶ್ಚಿಸಲಾಗದು. ಈ ದಾಂಪತ್ಯ ಜೀವನದ ಚಿತ್ರಣವನ್ನು ನೋಡಿ ಅವರೊಬ್ಬ ಧ್ಯೇಯವಾದಿ ಗಳೇನೊ ನಿಜ ಎಂನೆನಿಸುವದು. ಆದರೂ ಪಾತ್ರರಚನೆಯಲ್ಲಿ ಅವರನ್ನೆ ನೋಡಲೆಸಗುವುದು ಸಾಹಸವೆಸರಿ.

ಅವರ ವಯಸು ಮೂವತ್ತಕ್ಕೆ ಸಮೀಪಿಸಿದಾಗ ಅವರು ವಾಲರಿಯಾ ವ್ಲಾಡಿಮಿರೊವ್ನಾ ಎಂಬ ಹುಡಿಗೆಯೊಬ್ಬಳನ್ನು ಪ್ರೀತಿಸುತ್ತಿದ್ದರು. ಆಕೆ ನೆರೆ

ಯಲ್ಲಿಯ ಜಮೀನದಾರನ ಮಗಳು. ವಾಗ್ದಾನವೂ ಆಗಬಹುದಾಗಿತ್ತು. ಆದರೆ ಮಾತು ಮಂಕಾಯಿತು. ಮುಂದೆ ಸೋಫಿಯಾ ಆಂಡ್ರೀವ್ನಾ ಎಂಬ ಹುಡಿಗೆ ಭೆಟ್ಟಿಯಾದಳು. ಆಕೆಯನ್ನೆ ೧೮೬೨ ರಲ್ಲಿ ಮದುವೆಯಾದರು. Family Happiness ಪ್ರಕಟನೆ ಹೊಂದಿದ್ದು ೧೮೫೯ ರಲ್ಲಿ—ಎಂದರೆ ಮದುವೆಯಾಗುವ ಮುಂಗಡ ಮೂರು ವರ್ಷ !

ವಾಲರಿಯಾ ಆಯಿತು, ಸೋಫಿಯಾ ಆಯಿತು ಇಬ್ಬರೂ ಅಷ್ಟೆ-೧೮-ವಯಸಿನವರು. ಸರ್ಜ ಮಿಕ್ಯಾಲಿಚ್ಚನಂತೆ "ಜನರು ಮದುವೆಯಾಗತಕ್ಕವರಲ್ಲಿ ನನ್ನನ್ನೆಣಿಸುವುದನ್ನು ಬಿಟ್ಟು ಬಿಟ್ಟಿರುವರು—ನನಗೂ ಹಾಗೆ ಎನಿಸುವದು." ಹೀಗೆನ್ನುತ್ತಲೆ ಈ ಕತೆಯನ್ನು ಬರೆದಿರಬೇಕು ಅವರು. ಸಾಮ್ಯವಾದರೂ ಇಷ್ಟರ ಮಟ್ಟಿಗೇ ಇದ್ದಿರಬೇಕು. Anna Karenine ದಲ್ಲಿನ ಲೇವ್ಹಿನ (Levine) ನ ಚಿತ್ರದಲ್ಲಿ ಏನೊ ಅಸ್ಪಷ್ಟವಾಗಿ ಟಾಲ್‌ಸ್ಟಾಯ್ ಅವರ ಭಾವಚಿತ್ರದ ಅನುಮಾನ ಮಾಡಿಕೊಳ್ಳಬಹುದು.

Family Happiness, Polikushka ಮುಂತಾದ ಕತೆಗಳನ್ನೋದಿ ತೂರ್ಗೆನೀವ್ಹನು ಕುಣಿದಾಡಿದನು. ತನ್ನ ಸ್ನೇಹಿತನೊಬ್ಬನಿಗೆ ಬರೆದ ಪತ್ರದಲ್ಲಿ "He is a master, a master!" ಎಂದು ಬಾಯಿತುಂಬ ಹೊಗಳಿದನು. ಈ ಶಬ್ದಗಳು ಅದೆಷ್ಟು ಅರ್ಥಪೂರ್ಣವಾಗಿವೆ!

---

## ಪಾತ್ರಗಳು

ಮಾರ್‍ಯಾ ಅಲೆಕ್ಸಾಂಡ್ರೊವ್ನಾ (ಮಾಷಾ ಅಥವಾ ಮಾಷಿಷ್ಕಾ)
ಕಥಾನಾಯಿಕೆ — ತನ್ನ ಚರಿತ್ರೆಯನ್ನು ಹೇಳುವಳು.
ಕ್ಯಾಟರೀನಾ ಕಾರ್ಲೋವ್ನಾ (ಕಾಟ್ಯಾ) ಮಾಷಳ ಗೆಳತಿ — ಶಿಕ್ಷಕಿ.
ಕೊಕೊಷಾ — ಮಾಷಳ ಮಗು — ಕೂಸು.
ಕುರ್‍ಝೊವ್ ಮೀನಿ ಶ್ನಾ — ಮುದಿ ದಾದಿ.
ಮಾರ್‍ಯಾ ಮೀನಿ ಶ್ನಾ — ನಿಕೊಲ್‌ಸ್ಕಿಯಲ್ಲಿ ಬಂದ ಅಭ್ಯಾಗತೆ
ಮಾರ್‍ಯುಷ್ಕಾ — ಸರ್ಜಿ ವಿಕ್ಯಾರಚ್ಷನ ಮನೆಯಲ್ಲಿಯ ಬಾನಗಿತ್ತಿ.
ನಾಡ್ಯೆರ್ಝಾ — ತೊತ್ತು
ನಿಕಿಟಾ — ಆಳು
ನಿಕೊಲಾಷ್ಕಾ — ಮತ್ತೊಬ್ಬ ಆಳು
ಡಿಮಿಟ್ರಿ ಸಿಡೊರೊವ್ಹ — ಪರಿಚಾರಕ
ಗ್ರಿಗೊರಿ — ಅಂತರ್ಗೃಹದಲ್ಲಿಯ ವ್ಯವಸ್ಥಾಪಕ.
ಪೀಟರ ಇವ್ಹಾನೊವ್ಹಿಚ್ಷ — ನಿಕೊಲ್‌ಸ್ಕಿಯಲ್ಲಿ ಬಂದ ಅಭ್ಯಾಗತ.
ಸರ್ಜೀ ಮಿಕ್ಯಾಲಿಚ್ಷ — ಮಾಷಳ ಪಾಲಕ — ಆಕೆಯನ್ನು ಮದುವೆ ಯಾಗುವವನು.
ಸೋನ್ಯಾ — ಮಾಷಳ ತಂಗಿ
ತರಾಸ —ಆಳು
ಟಾಟ್ಯಾನಾ ಸಿಮ್ಯೊನೊವ್ನಾ — ಸರ್ಜಿಯ ತಾಯಿ.
ಫಾನ್ಯಾ — ಕೂಸು (ಸರ್ಜಿ ಮಿಕ್ಯಾಲಿಚ್ಷನು ತನ್ನ ಮಗುವಿಗೆ ನಗೆಯಾಡಿಕೆ ಯಿಂದ ಇವ್ಹಾನ ಸರ್ಜಿಯಿಚ್ಷ ಎಂದು ಮರ್ಯಾದೆ ಕೊಡುವನು.)
ಲೆರ್ಮೊಂಟೊವ್ಹ—ರಶ್ಯದ ಮಹಾಕವಿಯೊಬ್ಬನು.
**ಬೀತೋವನ್ ಮತ್ತು ವೋರ್‍ಝಾ**........ಪಾಶ್ಚಾತ್ಯ ಸಂಗೀತ ಕೋವಿದರಲ್ಲಿಯ ಅಗ್ರಣಿಗಳು.

**ಟೀಪು :** ಮೂಲದರಲ್ಲಿ ಐದು ಪರಿಚ್ಛೇದಗಳದೊಂದು ಭಾಗ, ಮೂರು ಪರಿಚ್ಛೇದಗಳದೊಂದು ಭಾಗ ಹೀಗೆ ಎರಡು ಭಾಗಗಳನ್ನು ಮಾಡಿದೆ. ಓದುಗರ ಸೌಕರ್ಯಕ್ಕಾಗಿ (ಓದುವಾಗ ತಡೆಯಾಗಬಾರದೆಂದು) ಎಲ್ಲ ಪರಿಚ್ಛೇದಗಳನ್ನು ಒಟ್ಟುಗೂಡಿಸಿ ಇಲ್ಲಿ ಕೊಟ್ಟಿದೆ.

ಮಾಷಾ........ಕಾಟ್ಯಾ............ಸೋನ್ಯಾ........ .... ಕ್ರಾಂತಿಪೂರ್ವರಷ್ಯದಲ್ಲಿ ಉಚ್ಚಶ್ರೇಣಿಯವರಷ್ಟೆ ಮನೆತನದ—ತಂದೆ ತಾಯಿಗಳ–ಹೆಸರನ್ನುಪ ಯೋಜಿಸುತ್ತಿದ್ದರು. ಉದಾ : ಸರ್ಜಿ ಮಿಕ್ಯಾಲಿಚ್ಷ್ ಎಂದರೆ ಮಿಕ್ಯಾಲನ ಮಗನಾದ ಸರ್ಜಿ — ಮಾರ್ಯಾ ಅಲೆಕ್ಷಾಂಡ್ರೊವ್ನಾ ಎಂದರೆ ಅಲೆಕ್ಷಾಂಡ್ರಳ ಮಗಳಾದ ಮಾರ್ಯಾ — ಮಾರ್ಯಾ ಕಾರ್ಲೋವ್ನಾ ಎಂದರೆ ಕಾರ್ಲನ ಮಗಳಾದ ಮಾರ್ಯಾ — ಬಳಕೆಯಲ್ಲಿ ಏನಾದರೊಂದು ಚಿಕ್ಕ ರೂಪವಿಡುವ ಪರಿಪಾಠವಿತ್ತು. ಮಾಷಾ .... .... .... ಕ್ಯಾಟರೀನ (Katherine) ಇದರ ಚಿಕ್ಕ ರೂಪ ಕಾಟ್ಯಾ (Katya). ಇತರ ಜನರಲ್ಲಿ ಚಿಕ್ಕ ಹೆಸರುಗಳೆ ರೂಢಿಯಲ್ಲಿದ್ದುವು. ತಂದೆಯ ಹೆಸರನ್ನು – ಮನೆತನದ ಹೆಸರನ್ನು ಉಪಯೋಜಿಸಿ ನಿರ್ದೇಶ ಮಾಡುವುದು ಸಂಬೋಧನೆಯಲ್ಲಿ ಸನ್ಮಾನ್ಯವೆಂದಾಗಿತ್ತು.

---

## ಸ್ಥಳ

ಪೊಕ್ರೊವ್‌ಸ್ಕಿ — ಮಾಷಳ ಆಸ್ತಿಯ ಹೆಸರು

ನಿಕೊಲ್‌ಸ್ಕಿ — ಸರ್ಜಿಯ ಆಸ್ತಿಯ ಹೆಸರು—

ಇದಕ್ಕೆ ಲೆನಿನ್ ಗ್ರಾಡ್ ಎಂದು ಹೆಸರು

ಪೀಟರ್ಸ್ ಬರ್ಗ — ಈಗಿನ ರಾಜಧಾನಿ ಮಾಸ್ಕೊ—ಪೀಟರ್ ದಿ ಗ್ರೇಟ ಎಂಬ ಅರಸನು ರಶ್ಯ ದೇಶಕ್ಕೆ ಯುರೊಪಿನಲ್ಲಿ ಪ್ರಾಶಸ್ತ್ಯ—ರಾಜಕೀಯ ಮಹತ್ತ್ವ ದೊರೆಯಬೇಕೆಂಬುದಾಗಿ ತನ್ನ ರಾಜಧಾನಿಯನ್ನು ಮಾಸ್ಕೊದಿಂದ (ಹೊಸಪಟ್ಟಣವಾದ) ಪೆಂಟ್ ಪೀಟರ್ಸ್‌ಬರ್ಗಿಗೆ ಒಯ್ದನು. ಕಳೆದ ಮಹಾಯುದ್ಧದಲ್ಲಿ ಇದರ ಹೆಸರು ಬದಲಾಯಿಸಿ ಪೆಟ್ರೊಗ್ರಾಡ್ ಎಂದು ಕರೆಯಲಾರಂಭಿಸಿದರು. ಸೊವ್ಹಿಯೆಟ್ ಸತ್ತೆಯಲ್ಲಿ ಈಗ ಇದನ್ನು ಲೆನಿನ್ ಗ್ರಾಡ ಎಂದು ಕರೆಯುವುದುಂಟು.

ಬೇಡನ್ — ಈ ಹೆಸರಿನ ಒಂದು ಪಟ್ಟಣವು ವ್ಹಿಯೆನ್ನಾ (ಆಸ್ಟ್ರಿಯಾ) ದಿಂದ ೧೭ ಮೈಲು ದೂರವಿದ್ದು ಇನ್ನೊಂದು ಝುರಿಚ್ಚಿ (ಸ್ವಿಝರ್ಲಂಡ) ನಿಂದ ೧೩ ಮೈಲು ದೂರವಿದೆ. ಮತ್ತೂ ಒಂದು ಪಟ್ಟಣವು ಬೇಡನ್ ಎಂಬುದು ಜರ್ಮನಿಯಲ್ಲಿ ಬ್ಲ್ಯಾಕ್ ಫಾರೆಸ್ಟ್ ಎಂಬ ಪ್ರದೇಶದಲ್ಲಿ ಕಾರ್ಲ್ಸ್‌ರೂ (Karlsruhe) ಟ್ಟಣದ ಹತ್ತಿರಿದೆ. ಕಡೆಯಲ್ಲಿ ನಿರ್ದಿಷ್ಟವಾದುದು ಸಂಗೀತದ ನಿರ್ದೇಶದ ಮೂಲಕ ಆಸ್ಟ್ರಿಯಾದಲ್ಲಿನ ತೋರುತ್ತದೆ.

# ಮನೆಯ ಸುಖಶಾಂತಿ.

## ಪರಿಚ್ಛೇದ ೧.

ನಾವು ತಾಯಿಯ ಸೂತಕದಲ್ಲಿದ್ದೆವು. ಆಕೆ ಶರದೃತುವಿನಲ್ಲಿ ತೀರಿ ಕೊಂಡಿದ್ದಳು. ನಾನು ಆ ಶರತ್ಕಾಲವನ್ನೆಲ್ಲ ಕಾಟ್ಯಾ ಮತ್ತು ಸೋನ್ಯಾ ಇವರ ಜೊತೆಯಲ್ಲಿ ಹಳ್ಳಿನಾಡಿನಲ್ಲಿ ಕಳೆದೆನು.

ಕಾಟ್ಯಾ ನಮ್ಮ ಮನೆಗೆ ಇಷ್ಟಳು-ನಮ್ಮನ್ನು ಕಲಿಸಿ ಬೆಳೆಯಿಸಿದ ಶಿಕ್ಷಕಿ- ನನಗೆ ಜ್ಞಾಪಶಕ್ತಿ ಬಂದಂದಿನಿಂದ ನಾನು ಅಕೆಯನ್ನು ಆದರದಿಂದ ನೋಡುತ್ತ ಬಂದಿದ್ದೆ ಸೋನ್ಯಾ ನನ್ನ ತಂಗಿ. ಪೊಕ್ರೊವ್‌ಸ್ಕಿಯಲ್ಲಿದ್ದ ನಮ್ಮ ಮನೆಯಲ್ಲಿ ನಾವು ಕಳೆದ ಆ ಚಳಿಗಾಲವು ಅತ್ಯಂತ ವಿಷಾದಪೂರ್ಣ ವಾಗಿತ್ತು. ಸುತ್ತಲೂ ಮೂಡಗಾಳಿ, ಚಳಿ-ಮಂಜಿನ ಉಬ್ಬಸ ಕಿಟಿಕಿಯನ್ನು ದಾಟಿ ಬರುತ್ತಿತ್ತು-ಕಿಟಿಕಿಯ ಗಾಜುಗಳು ಇಬ್ಬನ್ನಿಯಿಂದ ಮಸುಕಾಗುತ್ತಿ ದ್ದುವು. ಆ ಚಳಿಗಾಲ ನಾವು ನಡೆಯುತ್ತಾಗಲಿ, ಗಾಡಿಯಲ್ಲಿ ಕುಳಿತಾಗಲಿ ಮನೆ ಬಿಟ್ಟು ಹೊರಬೀಳಲಿಲ್ಲ. ನಮ್ಮನ್ನು ಕಾಣಬಂದವರು ತೀರ ಸ್ವಲ್ಪ ಜನ ಅವರು ನಮ್ಮಲ್ಲಿ ಚೈತನ್ಯ ಸುಖ ಶಾಂತಿಗಳನ್ನು ತರಲಿಲ್ಲ. ಅವರು ಮೋರೆ ಸಪ್ಪಗೆ ಮಾಡಿ ಮೆಲ್ಲನಿಯಿಂದ ಮಾತನಾಡುವರು-ಮಲಗಿದವರನ್ನಾರ ನ್ನಾದರೂ ಎಚ್ಚರಿಸುವ ಭಯವೊ ಏನೋ ಅವರಿಗೆ-ಅವರು ನಗೆಯಾಡಲಿಲ್ಲ, ನನ್ನೆಡೆಗೆ ಅದರಲ್ಲೂ ಸೋನ್ಯಳ ಕರಿ ಬಟ್ಟೆಗಳನ್ನು ನೋಡಿ ಸದಾ ನಿಟ್ಟುಸಿರು ಬಿಡುವರು-ಕಣ್ಣೀರು ಸುರಿಸುವರು. ಮನೆಗೆ ಸಾವಿನ ಕಳೆಗುಂದು ಅಂಟು ಕೊಂಡಿತ್ತು. ನೋವು ಸಾವುಗಳ ಸಡಗರ ಎಲ್ಲೆಲ್ಲಿಯೂ ಹರಿದಾಡುತ್ತಿತ್ತು. ನಮ್ಮ ತಾಯಿಯ ಕೋಣೆಗೆ ಬೀಗ ಹಾಕಿಟ್ಟಿತ್ತು. ನಾನು ಮಲಗಲಿಕ್ಕೆ ಹೋಗುವಾಗ ದಾರಿಯಲ್ಲಿ ಆ ಬರಿ ಕೋಣೆಯೆಡೆಗೆ ನೋಡುವ ಬಯಕೆ ಯನ್ನು ತಡೆಯುವುದಾಗುತ್ತಿರಲಿಲ್ಲ.

ಆಗ ನನ್ನ ವಯಸ್ಸು ಹದಿನೇಳು. ನಮ್ಮ ತಾಯಿ ತೀರಿದ ವರ್ಷ ಪ್ರತಿಷ್ಠಿತ ಸಮಾಜದಲ್ಲಿ ಗುರುತು ಬಳಕೆಯಾಗಬೇಕೆಂದು ನನ್ನನ್ನು ಪೀಟರ್ಸ ಬರ್ಗಿಗೆ ಕರಕೊಂಡು ಹೋಗಬೇಕೆಂದಿದ್ದಳು. ತಾಯಿಯನ್ನು ಕಳಕೊಂಡದ್ದರಿಂದ ನನಗೆ ಮಿತಿಮೀರಿ ದುಃಖವಾದದ್ದೇನೊ ನಿಜ. ಆದರೆ ಆ ದುಃಖದಾಚೆ ಇನ್ನೊಂದು ಭಾವವಿತ್ತೆಂಬುದನ್ನು ಒಪ್ಪಲೇಬೇಕು. ನಾನು ಚಿಕ್ಕವಳು, ಚೆಲುವೆ ( ಎಲ್ಲರೂ ಹೇಳುವ ಮಾತು ), ನಾನು ಹಳ್ಳಿವಾಡಿನಲ್ಲಿ ಕಳೆಯುತ್ತಿರುವ ಆ ಚಳಿಗಾಲವು ಎರಡನೆಯದು. ಆ ಚಳಿಗಾಲ ಮುಗಿಯುವ ಮುಂಚೆ, ಈ ಮನದ ಸೋಲು, ಒಂಟಿಗತನ, ಬಿಟ್ಟಿಬೇಸರ ಬೆಳೆದುಹೋಗಿದ್ದುವು—ನಾನು ಕೋಣೆ ಬಿಟ್ಟು ಹೊರಬೀಳದಾದೆ, ಪಿಯಾನೋವ ಬಾಯಿ ತೆರೆಯದಾದೆ, ಪುಸ್ತಕ ಮುಟ್ಟದಾದೆ. ಕಾಟ್ಯಾ ನನಗೆ ಮನವನ್ನು ಏನಾದರೊಂದು ಉದ್ಯೋಗದಲ್ಲಿ ತೊಡಗಿಸಹೇಳಿದಾಗ 'ಅದು ನನ್ನಿಂದಾಗದೆ'ಂದು ಹೇಳಿದೆ. ಆದರೆ ಮನದಲ್ಲೆಂದು ಕೊಂಡೆ-"ಅದರಿಂದೇನು ಪ್ರಯೋಜನ? ನನ್ನ ಆಯುಷ್ಯದ ಹರಿಗಾಲವು ಬರಡಾಗಿ ನಡೆದಾಗ ಏನು ಮಾಡಿ ಏನು ಫಲ?" ಈ ಪ್ರಶ್ನೆಗೆ ಕಂಬನಿಗಳೊಂದೆ ನನ್ನ ಉತ್ತರ.

ದಿನದಿನಕ್ಕೆ ನಾನು ಸೀರಾಗುತ್ತ ಕಳೆಗುಂದುತ್ತ ನಡಿದಿದ್ದೆನೆಂದು ಹೇಳುತ್ತಿದ್ದರು. ಇದರಿಂದ ನನ್ನ ಮನ ಹಿಡಿಯಲಿಲ್ಲ. ಆಗಿದ್ದರಾಗಿರಬಹುದು ಯಾರಿಗೆ ( ಸುಧಾರಿಸುವುದು ) ಬೇಕಿತ್ತು? ನನ್ನ ಆಯುಷ್ಯವೆಲ್ಲ ಒಂದೆಒಂದು ಒಂಟಿಗತನದಲ್ಲಿ, ಅನುವಿಲ್ಲದ ರುಕ್ಷತನದಲ್ಲಿ ಸಾಗುವುದೆಂದೆನಿಸಿತು ನನಗೆ. ಅದರಿಂದ ಬಿಡುಗಡೆ ಹೊಂದಲು ನನ್ನಲ್ಲಿಯೆ ಶಕ್ತಿ, ಆಶೆ ಇರಲಿಲ್ಲ. ಚಳಿಗಾಲದ ಕೊನೆಗೆ ಕಾಟ್ಯಾ ನನಗಾಗಿ ಕಾತರಗೊಂಡು ನನ್ನನ್ನು ಸ್ಥಲಾಂತರಿಸಬೇಕೆಂದು ಯತ್ನಿಸಿದಳು. ಅದಕ್ಕೆ ರೊಕ್ಕದ ಅವಶ್ಯಕತೆ ಇತ್ತು-ನನ್ನ ತಾಯಿ ಸತ್ತಾಗ ನಮ್ಮ ಸ್ಥಿತಿಗತಿ ಏನಿತ್ತೆಂಬುದರ ಅರಿವು ನಮಗಿರಲಿಲ್ಲ. ನಮ್ಮ ಪಾಲಕ ನಮ್ಮ ಆರ್ಥಿಕ್ಯದ ಕಲ್ಪನೆ ನಮಗೆ ಕೊಡುವುದಕ್ಕಾಗಿ ಬರತಕ್ಕವರಿದ್ದರು. ಅವರನ್ನು ನಾವು ದಿನಾಲು ನಿರೀಕ್ಷಿಸುತ್ತಿದ್ದೆವು.

ಮಾರ್ಚ ತಿಂಗಳಲ್ಲಿ ಅವರು ಬಂದರು. ನಾನು ಒಂದು ದಿನ ಕೋಣೆಯಲ್ಲಿ ಉದ್ಯೋಗವಿಲ್ಲದೆ, ಮನವೊಲಿಕೆಯಿಲ್ಲದೆ, ಪ್ರವೃತ್ತಿಯಿಲ್ಲದೆ, ಇತ್ತಿಂ

ದತ್ತ ಅತ್ತಿಂದಿತ್ತ ಓಡಾಡುತ್ತಿದ್ದಾಗ ಕಾಟ್ಯಾ "ದೇವರು ದೊಡ್ಡವ!" ಎಂದಳು. "ಸರ್ಜಿ ಮಿಕ್ಯಾಲಿಚ್ಷ್ನರು ಬಂದಿರುವರು. ನಮ್ಮಣ್ಣವರು ವಿಚಾರಿಸಿರುವರು–ಭೋಜನಕ್ಕೂ ಬರಲಿರುವರು." ಮತ್ತೂ ಎಂದಳು, "ಮಾಷಿಷ್ಕಾ, ನೀನೆ ಹುರುಪಗೊಳ್ಳಬೇಕು. ಅವರೇನೆಂದಾರು ನೋಡು. ಅವರು ನಿಮ್ಮನ್ನು ಒಳ್ಳೆಯಾಗಿ ಲಾಲಿಸಿದವರು."

ಸರ್ಜಿಮಿಕ್ಯಾಲಿಚ್ಷ್ನರು ನಮ್ಮ ನೆರೆಯವರು–ತಂದೆಯವರಿಗಿಂತ ಚಿಕ್ಕವರಾದರೂ ಅವರ ಸ್ನೇಹಿತರಾಗಿದ್ದರು ಅವರ ಬರುವಿಕೆಯಿಂದ ನಮ್ಮ ಮೊದಲಿನ ವಿಚಾರಗಳಲ್ಲಿ ಬದಲಾಗಿ ನಾವು ಸ್ಥಲಾಂತರಿಸುವುದು ಶಕ್ಯವಾಗಬಹುದಾಗಿತ್ತು. ಮೇಲಾಗಿ ನಾನವರನ್ನು ಆದರ ಪ್ರೀತಿಭಾವಗಳಿಂದ ನೋಡುತ್ತಬಂದಿದ್ದೆ. ನಮ್ಮ ಇತರ ಇಷ್ಟಮಿತ್ರರಿಗಿಂತ ಅವರ ಮನದಲ್ಲಿ ನನ್ನ ಬಗೆಗೆ ವಿಪರೀತ ಗ್ರಹಿಕೆಯಾದರೆ ನಾನು ವಿಶೇಷ ನೊಂದುಕೊಳ್ಳುವೆನೆಂದು ಊಹಿಸಿಯೆ ಕಾಟ್ಯಾ ನನಗೆ ಹುರುಪಗೊಳ್ಳಲಿಕ್ಕೆ ಹೇಳಿದ್ದು. ಮನೆಯಲ್ಲಿ ಕಾಟ್ಯಳನ್ನು ಮೊದಲ್ಗೊಂಡು ಅವರ ದತ್ತಪುತ್ರಿ ಸೋನ್ಯಳವರೆಗೆ ಅವರನ್ನು ವಾಡಿಕೆಯಾಗಿ ಪ್ರೀತಿಸುತ್ತಿದ್ದರು–ಅದರಂತೆ ನಾನೂ ಪ್ರೀತಿಸುತ್ತಿದ್ದೆ. ಆದರೂ ನನಗವರು ಹೆಚ್ಚಿನವರಾಗಿದ್ದರು. ನಮ್ಮ ತಾಯಿ ನನ್ನೆದುರಿಗೊಂದು ದಿನ ಉಸಿರಿದ ಉದ್ಗಾರಗಳ ಮೂಲಕ "ಅವರಂಥ ಗಂಡನನ್ನೆ ಮದುವೆಯಾಗು." ಎಂದಿದ್ದಳಾಕೆ. ಆಗ ನನಗದು ವಿಚಿತ್ರ ಮತ್ತು ಸರಿಬಾರದ್ದಾಗಿತ್ತು. ನನ್ನ ಕಲ್ಪನೆಯಗಂಡನು ಸೀರ, ತಿಳಿಗಳೆಯುವ, ಕರುಣಾಮೂರ್ತಿಯಾಗಿದ್ದನು. ಆದರೆ ಸರ್ಜಿಮಿಕ್ಯಾಲಿಚ್ಷ್ನರು ನಡುವಯಸಿನವರು. ಎತ್ತರವಾದ ನಿಲುವು. ಗಟ್ಟಿಮುಟ್ಟ ಮೈಕಟ್ಟು–ಸದಾ ಆನಂದವೃತ್ತಿ. ಆದರೂ ನಮ್ಮ ತಾಯಿ ನುಡಿದದ್ದು ನನ್ನ ಮನದಲ್ಲಿ ದೃಢವಾಗಿ ನೆಲೆಸಿತ್ತು. ಆರು ವರುಷಗಳಾಚೆ, ನಾನಿನ್ನೂ ಹನ್ನೊಂದು ವಯಸಿನವಳಿದ್ದೆ–ಅವರಿನ್ನೂ ನನ್ನನ್ನು 'ನೀನು ತಾನು' ಎಂದು ಮಾತನಾಡಿಸುತ್ತಿದ್ದರು–ನನ್ನನ್ನು 'ವಾಯುಲತೆ' ಯೆಂದು ಪ್ರೀತಿಯ ಹೆಸರುಗೊಂಡು ಕರೆಯುತ್ತಿದ್ದರು–ಆಗಲೂ ಒಮ್ಮೊಮ್ಮೆ ನಾನು ನನ್ನನ್ನು ಭಯಗೊಂಡು ಕೇಳಿಕೊಳ್ಳುತ್ತಿದ್ದೆ, "ಇವರು ಹೀಗೇ ನನ್ನನ್ನು ಮದುವೆಯಾಗಬೇಕೆಂದರೆ ನಾನೇನು ಮಾಡಲಿ?"

ಭೋಜನಕ್ಕೆ ಮೊದಲು–ಅಂದು ಕಾಟ್ಯಾ ಒಂದೆರಡು ಸಿಹಿ ಪಕ್ವಾನ್ನ, ವ್ಯಂಜನ ಪದಾರ್ಥಗಳನ್ನು ಬೆಳೆಯಿಸಿದ್ದಳು–ಸರ್ಜಿಮಿಕ್ಯಾಲಿಚ್ಸ್ನರು ಬಂದರು. ನಾನು ಕಿಟಕಿಯಿಂದ ಅವರು ಒಂದು ಸಣ್ಣ ಸರಿಗಾಡಿಯಲ್ಲಿ ಕೂತು ಮನೆಯವರೆಗೆ ಬರುವುದನ್ನು ನೋಡಿದೆ–ಗಾಡಿ ಮೂಲೆಗೆ ಹೊರಳಿದಾಗ ನಾನು ಅವಸರದಿಂದ ದಿವಾಣಖಾನೆಗೆ ಬಂದೆ–ಅವರ ಆ ಭೆಟ್ಟಿ ತೀರ ಅನಿರೀಕ್ಷಿತವಾದುದೆಂದು ತೋರಿಸಲಿಕ್ಕೆ. ಆದರೆ ಅವರ ಕಾಲಸಪ್ಪಳ, ಅವರ ಮಾರ್ದನಿ, ಕಾಟ್ಯಳ ಕಾಲಸಪ್ಪಳ ಹಾಲಿನಲ್ಲಿ ಕೇಳಬಂದುವು–ಆಗ ನನ್ನ ಸ್ಥೈರ್ಯ ಕುಗ್ಗಿ ನಾನೆ ಅವರನ್ನು ಎದುಗೊಂಡೆ. ಅವರು ಕಾಟ್ಯಳ ಕೈ ಹಿಡಿದಿದ್ದರು, ದೊಡ್ಡ ದನಿಯಿಂದ ಮಾತನಾಡುತ್ತಿದ್ದರು, ನಗುತ್ತಿದ್ದರು, ನನ್ನನ್ನು ನೋಡಿ ಸುಮ್ಮನಾದರು, ಅಭಿವಾದನೆ ಮಾಡದೆ ನನ್ನೆಡೆಗೆ ನೋಡಿದರು. ನನಗೆ ಹೇಗೆ ಹೇಗೊ ಎನಿಸಿ ನಾಚಿಕೆ ಸಾವಾಯಿತು.

"ಅದು ನೀವೆ ಇದ್ದಿರಬಹುದೆ?" ಅವರು ನೇರವಾಗಿ ನುಡಿಯುತ್ತ ತಮ್ಮ ಕೈಗಳನ್ನು ಚಾಚಿ ನನ್ನೆಡೆಗೆ ಬಂದರು. "ಇಷ್ಟು ಭಾರಿ ಬದಲು ಶಕ್ಯವಿದ್ದೀತೆ? ನೀವೆಷ್ಟು ಬೆಳೆದುಬಿಟ್ಟಿರುವಿರಿ! ವಾಯುಲತೆಯೆಂದು ನಾನು ನಿಮ್ಮನ್ನು ಕರೆಯುತ್ತಿದ್ದೆ–ಆದೀಗ ನೀವು ಅರಳಿನ ಗುಲಾಬಿಯಾಗಿರುವಿರಿ."

ನನ್ನ ಕೈಯನ್ನು ತಮ್ಮ ಹರವಾದ ಕೈಯಲ್ಲಿ ತೆಗೆದುಕೊಂಡು ಕುಲುಕಿಸಿದರು–ನನಗೆ ನೋವಾಯಿತು. ಅವರು ನನ್ನ ಕೈಗೆ ಮುತ್ತಿಡಬಹುದೆಂದಪೇಕ್ಷಿಸಿ ನಾನವರೆಡೆಗೆ ಬಾಗಿದೆ. ಆದರೆ ಅವರು ಪುನಃ ನನ್ನ ಕೈಯನ್ನು ಮೆದ್ದಿ ನನ್ನ ಕಣ್ಣಲ್ಲಿ ಕಣ್ಣಿಟ್ಟು ತಮ್ಮ ಮೊಗದಮೇಲಿನ ಆ ಹಿಂದಿನ ನಿಶ್ಚಲತೆ, ನಲಿದಾಟಗಳಿಂದ ನೋಡಿದರು.

ನಾನವರನ್ನು ನೋಡಿ ಆರು ವರುಷಗಳಾಗಿದ್ದುವು. ಅವರಲ್ಲಿ ಎಷ್ಟೋ ಬದಲಾಗಿತ್ತು–ವಯಸು ಹೆಚ್ಚಾಗಿತ್ತು, ಮುಖಮುದ್ರೆ ಕಂದಿತ್ತು. ಅವರೀಗ ಕಲ್ಲೆಗಳನ್ನು ಬೆಳೆಯಿಸಿದ್ದರು–ಅವರಿಗವು ಒಪ್ಪುತ್ತಿರಲಿಲ್ಲ. ಈ ಹೊರತು ಅವರು ಮೊದಲಿನಂತೆಯೆ ಇದ್ದರು–ಅವರ ಸಾದಾ ನಡವಳಿ, ಥಾಳವಾದ ಕಣ್ಣು ಮೂಗು, ಬುದ್ಧಿಚಾಪಲ್ಯ, ಎಳೆ ಮಗುವಿನಂತಿದ್ದ ನಗು-ಎಲ್ಲವು ಇದ್ದಕಿದ್ದಂತೆ ಇದ್ದುವು.

ಐದು ನಿಮಿಷಗಳ ನಂತರವರು ಅತಿಥಿಗಳಾಗಿರಲಿಲ್ಲ ನಮ್ಮೆಲ್ಲರ ಇಷ್ಟರಾಗಿದ್ದರು. ನಮ್ಮ ಆಳುಮಕ್ಕಳು ಕೂಡ ಅವರ ಭೆಟ್ಟಿಯಿಂದಾದ ಆನಂದವನ್ನು ಅವರನ್ನುಪಚರಿಸಬೇಕೆಂಬ ಲವಲವಿಕೆಯಿಂದ ಹೊರದೋರಿದರು.

ನಮ್ಮ ತಾಯಿ ತೀರಿಕೊಂಡಾಗ ಬಂದ ನಮ್ಮ ಇತರ ನೆರೆಯವರಿಗೆ ಬೇರೆಯವರಾಗಿ ಅವರು ವರ್ತಿಸಿದರು. ಆ ನೆರೆಯವರಿಗೆ ನಮ್ಮೆಡೆಗೆ ಕೂತಾಗ ಮಾತಿಲ್ಲದೆ ಕಂಬನಿ ಸುರಿಸುವುದೆ ಉಚಿತವೆನಿಸಿತ್ತು. ಆದರೆ ಇವರು ಹಿರಿಹಿಗ್ಗಿನಿಂದ ಮಾತನಾಡುತ್ತಿದ್ದರು. ನಮ್ಮ ತಾಯಿಯ ಬಗೆಗೆ ಅವಾಕ್ಷರವಿಲ್ಲ. ನನಗದು ಮೊದಲು ತೀರ ವಿಚಿತ್ರ, ಇಷ್ಟರಲ್ಲಿ ಅನುಚಿತವೆಂದೆನಿಸಿತು. ಆದರೆ ಕಾಲಾಂತರದಿಂದ ಅದು ಹಚ್ಚಿಕೊಳ್ಳುವ ಪ್ರವೃತ್ತಿಯೆಂದು ಕಂಡುಬಂತು ನನಗುಪಕಾರವೆನಿಸಿತು. ಸಂಜೆಗೆ ಕಾಟ್ಯಾ ತನ್ನ ಹಳೆಯ ಸ್ಥಳದಲ್ಲಿ ಕುಳಿತು ಚಹಾ ಸುರುವಿದಳು. ನಮ್ಮ ತಾಯಿ ಇದ್ದಾಗ ದಿವಾಣಖಾನೆಯಲ್ಲಿ ಆಕೆ ತಾನು ಕೂಡುವ ಸ್ಥಳವದು. ಸೋನ್ಯಾ ಮತ್ತು ನಾನು ಅವರ ಹತ್ತರ ಕುಳಿತಿದ್ದೆವು. ನಮ್ಮ ಮುದುಕ ಪರಿಚಾರಕ ಗ್ರಿಗೋರಿ ತಂದೆಯವರ ಹಳೆಯ ಚಿಲಿಮಿಯೊಂದನ್ನು ಹುಡುಕಿ ತಂದು ಅವರ ಕೈಯಲ್ಲಿ ಕೊಟ್ಟಿದ್ದ. ಅವರು ವಾಡಿಕೆಯಂತೆ ಇತ್ತಿಂದತ್ತ ಅತ್ತಿಂದಿತ್ತ ಓಡಾಡುತ್ತಿದ್ದರು.

"ಎಲ್ಲವನ್ನು ವಿಚಾರಿಸಿ ನೋಡಿದರೆ ಎಂಥ ಭೀಕರವಾದ ಬದಲುಗಳಾಗಿರುವುವ ಈ ಮನೆಯಲ್ಲಿ!" ಅವರು ಓಡಾಟವನ್ನು ನಿಲ್ಲಿಸಿ ನುಡಿದರು.

"ಅಹುದು." ಎಂದು ಕಾಟ್ಯಾ ನಿಟ್ಟುಸಿರು ಬಿಟ್ಟಳು. ಆಮೇಲೆ ಅವಳು ಪಾತ್ರೆಯ ಮೇಲೆ ಮುಚ್ಚಳವನ್ನಿಕ್ಕುತ್ತ ಅವರೆಡೆಗೆ ನೋಡಿದಳು. ಆಕೆ ಅಳಮೋರೆಗೇ ಬಂದಿದ್ದಳು.

"ತಂದೆಯ ನೆನಪಿದ್ದೀತು ನಿಮಗೆ?" ನನ್ನೆಡೆಗೆ ತಿರುಗಿ ಅವರೆಂದರು.

"ಅಷ್ಟು ನಿಚ್ಚಳವಾಗಿಲ್ಲ." ನಾನೆಂದೆ.

"ಅವರಿದ್ದರೆ ನೀವಿಬ್ಬರೂ ಈಗ ಎಷ್ಟು ಸುಖದಿಂದಿರುತ್ತಿದ್ದಿರಿ!" ನನ್ನನ್ನು ಮೇಲ್ಗಣ್ಣಿನಿಂದ ನೋಡುತ್ತ ಮೆಲ್ದನಿಯಿಂದ ನುಡಿದರು. "ನನಗ

ವರಲ್ಲಿ ಬಲುಪ್ರೀತಿ. ” ಎಂದಾಗ ದನಿ ತಗ್ಗಿತ್ತು, ಕಣ್ಣುಗಳು ಸ್ವಲ್ಪ ಹೊಳೆದಂತೆ ತೋರಿದುವು.

“ ಈಗ ದೇವರು ಹಿರಿಯಳನ್ನು ಒಯ್ದನು.” ಎಂದು ಕಾಟ್ಯಾ ಚಹಾದ ಪಾತ್ರೆಯ ಮೇಲೆ ಪಂಜೆಯನ್ನು ಹೊದಿಸಿ, ತನ್ನ ಕರವಸ್ತ್ರ ತೆಗೆದು ಅಳತೊಡಗಿದ್ದಳು.

“ಅಹುದು. ಎಂಥ ಭೀಕರವಾದ ಬದಲುಗಳಾಗಿರುವುವು ಈ ಮನೆಯಲ್ಲಿ. ” ಎಂದು ಮೋರೆ ತಿರುವಿ ಅವರು ಮತ್ತೆ ನುಡಿದರು. “ ಸೋನ್ಯಾ, ನಡೆ. ನಿನ್ನ ಆಟಿಗೆಗಳನ್ನು ತೋರಿಸು ” ಎಂದು ನುಡಿದು ತುಸು ಹೊತ್ತಿನಲ್ಲಿ ನಡುಮನೆಗೆ ಹೋದರು. ಅವರು ಹೋದ ಬಳಿಕ ಕಂಬನಿ ತುಂಬಿಕೊಂಡು ನಾನು ಕಾಟ್ಯಳೆಡೆಗೆ ನೋಡಿದೆ.

“ ಎಂಥ ಉದಾರ ಆಪ್ತ ಮಿತ್ರರಿವರು ! ” ಆಕೆ ಎಂದಳು. ಅವರು ನಮ್ಮ ಆಪ್ತರಿರಲಿಲ್ಲವಾದರೂ ಅವರ ಸಹಾನುಭೂತಿಯಿಂದ ನನ್ನಲ್ಲಿ ಸಮಾಧಾನ, ಒಂದು ಬಗೆಯ ಹಿಗ್ಗು ನೆಲೆಯಿಸಿತು.

ನಡುಮನೆಯಲ್ಲಿ ಸೋನ್ಯಳ ಜೊತೆಯಲ್ಲಿ ಅವರ ಓಡಾಟ, ಆಕೆಯ ಎಳೆ ಏರದನಿ ಕೇಳಬರುತಲಿತ್ತು ನಾನು ಅವರಿಗಾಗಿ ಚಹಾ ಅಲ್ಲಿ ಕಳಿಸಿಕೊಟ್ಟೆ. ಅವರು ಪಿಯಾನೊದ ಹತ್ತರ ಕುಳಿತು ಸೋನ್ಯಳ ಪುಟ್ಟ ಕೈಯಿಂದ ಸ್ವರಗಳ ಮೇಲೆ ಕೈಯಾಡಿಸಿದ್ದು ಕೇಳಬಂತು.

ಆಮೇಲವರ ದನಿಯಾಯಿತು. “ಮಾರ್ಯಾ ಅಲೆಕ್ಸಾಂಡ್ರೊವ್ನಾ, ಇಲ್ಲಿ ಬನ್ನಿರಿ. ಸ್ವಲ್ಪೇನಾದರೂ ನುಡಿಸಿರಿ. ”

ಅವರು ನನ್ನಲ್ಲಿ ಈ ರೀತಿ ಸಹಜವಾಗಿ ನಡಕೊಳ್ಳುವುದು—ಅವರ ದನಿಯಲ್ಲಿಯ ಸ್ನೇಹದ ಆಗ್ರಹ ನೋಡಿ ಸೇರಿಕೆಯಾಯಿತು. ನಾನು ಎದ್ದು ಅವರೆಡೆಗೆ ನಡೆದೆ.

"ಇದನ್ನು ನುಡಿಸಿರಿ" ಎಂದು ಬೀತೋವನ್ನನ ಸಂಗೀತಾವಳಿಯ ಲ್ಲಿಯ ಜ್ಯೋತ್ಸ್ನಾಗೀತಿಯ ಆಭೋಗವಿದ್ದ ಪುಟವನ್ನು ತೆರೆದರು. "ಇದನ್ನು ಹೇಗೆ ನುಡಿಸುವಿರಿ ನೋಡೋಣ" ಎಂದೆನ್ನುತ್ತ ಚಹಾದ ಬಟ್ಟಲವನ್ನು ಕೈಯುಲ್ಲಿ ತೆಗೆದುಕೊಂಡು ಒಂದು ಮೂಲೆಗೆ ಹೋಗಿ ನಿಂತರು.

ಹೇಗೊ ಏನೊ ಅವರು ಹೇಳಿದ್ದನ್ನು ನಿರಾಕರಿಸುವುದಾಗಲಿ, (ಪಿಯಾನೊ) ನುಡಿಸುವುದರಲ್ಲಿ ನನಗಷ್ಟು ಗತಿಯಿಲ್ಲವೆಂದು ಮೊದಲೆ ಹೇಳುವುದಾಗಲಿ ನನ್ನಿಂದಾಗಲಿಲ್ಲ. ನಾನು ಅವರ ಹೇಳಿಕೆಯಂತೆ ಪಿಯಾನೊದ ಹತ್ತರ ಕುಳಿತೆ. ನನಗೆ ಬಂದಂತೆ ನಾಲ್ಕು ಸ್ವರಗಳನ್ನು ನುಡಿಸತೊಡಗಿದೆ. ನನಗೆ ವಿಚಕ್ಷಣೆಯ ಭೀತಿಯಿತ್ತು. ಅವರಿಗೆ ಸಂಗೀತದಲ್ಲಿ ಗತಿಯಿದ್ದು ಕೇಳುವ ಆಸ್ಥೆಯಿತ್ತು ಆ ಆಭೋಗವು ನಾವು ಚಹಾ ಕುಡಿಯುವಾಗ ನಮ್ಮ ಸಂಭಾಷಣೆಯಲ್ಲಿ ಹೊರಟ ಹಳೆಯ ನೆನಪಿಗೆ ಸರಿಯಾದದ್ದಾಗಿತ್ತು. ನಾನಾದರೂ ಅದನ್ನು ಶಕ್ಯವಿದ್ದಮಟ್ಟಿಗೆ ಚೆನ್ನಾಗಿ ನುಡಿಸಿದೆ. ಆದರವರು ಸಂಚಾರಿಯನ್ನು ನುಡಿಸಗೊಡಲಿಲ್ಲ. "ಬೇಡ." ಅವರು ನನ್ನೆಡೆಗೆ ಬಂದು ನುಡಿದರು. "ಅದನ್ನು ಸರಿಯಾಗಿ ನೀವು ನುಡಿಸುವುದಿಲ್ಲ. ಮುಂದೆ ಸಾಗಬೇಡಿರಿ. ಆದರೂ ಮೊದಲಿನ ಸ್ವರಮೇಳವು ಸರಿಯಾಗಿದೆ. ನಿಮಗೆ ಸಂಗೀತದಲ್ಲಿ ಗತಿಯಿದ್ದಂತಿದೆ." ಆ ಸರ್ವಸಾಮಾನ್ಯ ಸ್ತುತಿಯಿಂದಲೂ ಹಿಗ್ಗಿನಿಂದ ನನ್ನ ಮೋರೆಗೆ ಕೆಂಪೇರಿತು. ನಮ್ಮ ತಂದೆಯವರ ಸ್ನೇಹಿತರು, ಅವರ ಕಾಲದವರು ನನ್ನ ಕೂಡ ನಡಕೊಳ್ಳುವಾಗ ಹುಡುಗರ ಕೂಡ ನಡಕೊಂಡಂತೆ ಮಾಡದೆ ಗಾಂಭೀರ್ಯದಿಂದ ನಡಕೊಂಡದ್ದನ್ನು ನೋಡಿ ನನಗೆ ಹಿಗ್ಗು ಸ್ವಲ್ಪ ವಿಚಿತ್ರವೆನಿಸಿತು ಸೋನ್ಯಳನ್ನು ಹೊದಿಸಿ ಮಲಗಿಸುವುದಕ್ಕಾಗಿ ಕಾಟ್ಯಾ ಮೇಲುಪ್ಪರಿಗೆಗೆ ನಡೆದಳು. ನಡುಮನೆಯಲ್ಲಿ ನಾವಿಬ್ಬರೆ ಉಳಿದೆವು.

ಅವರು ನನಗೆ ತಂದೆಯವರ ವಿಷಯವಾಗಿ ಹೇಳತೊಡಗಿದರು. ತಮ್ಮ ಗೆಳೆತನ ಮೊದಲ ಮಾಡಿದ್ದು–ತಾವಿಬ್ಬರೂ ಕಳೆದ ಆನಂದದ ದಿನಗಳು–ಆಗ ನಾನು ನನ್ನ ಅಭ್ಯಾಸದ ಪುಸ್ತಕ ಆಟಿಗೆ ಮುಂತಾದವುಗಳಲ್ಲಿ ತೊಡಗಿದ್ದೆ. ತಮ್ಮ ಮಾತಿನಲ್ಲಿ ಅವರು ತಂದೆಯವರ ಚಿತ್ರವನ್ನು ಬೇರೆಯಾಗಿ ನನ್ನೆದುರಿಗೆ ನಿಲ್ಲಿಸಿದರು–ಒಬ್ಬ ಸರಳ ಸ್ವಭಾವದ ಸಜ್ಜನರಿದ್ದರೆಂದು. ಆಮೇ

ಲವರು ನನ್ನನ್ನು ನನ್ನ ಒಲವು, ನಾನು ಓದಿದ ಪುಸ್ತಕಗಳು, ಮುಂದೇನು ಮಾಡಬೇಕೆಂದಿರುವೆ ಮುಂತಾದವುಗಳನ್ನು ಕೇಳಿ ಅನೇಕ ಸೂಚನೆಗಳನ್ನು ಮಾಡಿದರು. ನನಗೆ (ಚಿಕ್ಕಂದಿನಲ್ಲಿ) ಆಟಿಗೆ ಮಾಡಿಕೊಟ್ಟು, ನಗೆಯಾಟ ಆಡುವವರು ಇಲ್ಲದಂತಾಗಿ ಅದರ ಬದಲೀಗ ಗಾಂಭೀರ್ಯ ತಾಳಿದ, ಸರಳ ಸ್ವಭಾವದ ನಲ್ಮೆಯ ಆಪ್ತಮಿತ್ರರು ನನ್ನೆದುರಿದ್ದರು. ಅವರ ಬಗೆಗೆ ನನ್ನಲ್ಲಿ ಆದರ ಸಹಾನುಭೂತಿಗಳು ಹುಟ್ಟದಿರಲಿಲ್ಲ ಅವರ ಕೂಡ ಮಾತನಾಡು ವುದು ಸಹಜವೂ ಮೋಜಿನದೂ ಆಗಿತ್ತು. ಆದರೂ ತಡೆಯದಾದ ಸಂಕೋ ಚವೂ ಎನಿಸುವದಿಲ್ಲ. ಶಬ್ದ ಶಬ್ದಕ್ಕೂ ಯೋಚಿಸಿ ಮಾತನಾಡುತ್ತಿದ್ದೆ. ನಾನು ತಂದೆಯವರ ಮಗಳಾದುದರಿಂದ ಅವರಲ್ಲಿ ನನ್ನ ಬಗೆಗೆ ನೆಲೆಸಿದ ನಲ್ಮೆ ಯನ್ನು ನಾನಾಗಿ ಗಳಿಸಬೇಕೆಂದು ಅದೆಷ್ಟು ಹಂಬಲ ನನ್ನಲ್ಲಿ.

ಸೋನ್ಯಳನ್ನು ಮಲಗಿಸಿ ಕಾಟ್ಯಾ ನಮ್ಮನ್ನು ಬಂದು ಕೂಡಿದಳು. ಎಲ್ಲದರಲ್ಲೂ ನನಗಿದ್ದ ಅನಾವಸ್ಥೆ ಅರುಚಿಗಳ ಬಗೆಗೆ ಬಳಗ ಹೂಡಿದಳು. ನಾನವರ ಬಗೆಗೆ ಮಾತನಾಡಿರಲೆ ಇಲ್ಲ.

"ಅಂತೂ ಒಂದು ಮಹತ್ತ್ವದ ಸಂಗತಿಯನ್ನೆ ನನಗಿವರು ಹೇಳಲಿಲ್ಲ!" ಎಂದೆನ್ನುತ್ತ ಅವರು ಮುಗಳ್ನಗೆ ನಕ್ಕು ತಲೆ ಅಲ್ಲಾಡಿಸಿದರು.

"ಅದೇನು ಹೇಳುವುದು "ನಾನೆಂದೆ" ಬೇಸರದ ಮಾತದು. ಇದೀಗ ಹೋಗುವುದು" ಆಗಲೆ ನನ್ನ ಬೇಜಾರ ಹೋಗುವುದೆಂದೆನಿಸಿತು. ಹೋಗಿ ಬಿಟ್ಟಿತ್ತು. ಬೇಜಾರವೆಂಬುದಿರಲೆ ಇಲ್ಲ.

"ಏಕಾಂತವಾಸವನ್ನು ತಡೆಯುವುದಾಗುವುದಿಲ್ಲವೆನ್ನುವುದು ಕೆಡಕು." ಅವರೆಂದರು, "ಚಿಕ್ಕ ವಯಸ್ಸೆಂದು ಹೀಗಾಗಿರಬಹುದೆ?"

"ನಾನು ಚಿಕ್ಕವಳೆ ಇರುವೆನು" ಎಂದು ನಾನು ನಕ್ಕುಬಿಟ್ಟೆನು.

"ಸುತ್ತ ನಾಲ್ಕು ಜನ ಸ್ತುತಿ ಮಾಡುವಾಗ ನಲಿದಾಡಿ ಅವರು ಹೋದ ಕೂಡಲೆ ಸಪ್ಪಂಡಿಯಾಗಿ ಏನನ್ನೂ ಸೇರದ ತರುಣಿಯನ್ನು ಒಳಗೆ ಹುರುಳಿಲ್ಲ. ಬರಿ ತೋರಿಕೆ. ನಾನು ಕೊಂಡಾಡಲಾರೆ"

" ಅಂತೂ ನನ್ನ ಬಗೆಗೆ ಚೆನ್ನಾಗಿ ಅಭಿಪ್ರಾಯವಿದೆ ತಮ್ಮದು. " ಎಂದು ನಾನು ಏನೊ ಮಾತನಾಡಬೇಕೆಂದು ನುಡಿದೆ.

ಅವರು ತುಸು ಹೊತ್ತು ಸುಮ್ಮನಿದ್ದರು. ಆಮೇಲೆಂದರು " ಅಹುದು. ನಿಮ್ಮಲ್ಲಿ ನಿಮ್ಮ ತಂದೆಯ ಹೋಲಿಕೆಯಿದೆ. ನಿಮ್ಮಲ್ಲಿ ಏನೊ ಒಂದು ವಿಶೇಷ–" ಅವರ ಸ್ನೇಹಪೂರ್ಣವಾದ ನೇರನೋಟ ನನ್ನನ್ನು ಹಿಗ್ಗಿಸಿತು, ಮೋಜಿನಿಂದ ಕುಲುಕಿಸಿತು.

ಈಗ ನಾನವರನ್ನು ನೋಡಿದೆ. ಮೊದಲ ನೋಟಕ್ಕೆ ತುರುತರಂಗಿನ ದೆಂದು ತೋರುವ ಅವರ ಮೋರೆಯಲ್ಲಿ ಒಂದು ವಿಶಿಷ್ಟವಾದ ಭಾವವಿತ್ತು. ಹೊಳಪಿನಲ್ಲಿ ಹೆಚ್ಚಾಗಿ ಏಕಾಗ್ರತೆ ವಿಷಣ್ಣತೆಗಳೆ ನೆಲೆಸಿದ್ದುವು. "

" ನೀವು ಬೇಜಾರಪಡಬಾರದು. " ಅವರೆಂದರು, " ನಿಮಗೆ ಸಂಗೀತ ದಲ್ಲಿ ಗತಿಯಿದೆ. ಪುಸ್ತಕಗಳಿವೆ ಓದುವುದಕ್ಕಾಗಿ. ಇಡಿ ಆಯುಷ್ಯ ನಿಮ್ಮೆದು ರಿನಲ್ಲಿದೆ. ಅದಕಾಗಿ ಸಜ್ಜುಗೊಳ್ಳುವುದಾಗಲಿ ಮುಂದಿನ ವಿಷಾದ ಪ್ರಸಂಗ ಗಳಿಂದ ಪಾರಾಗುವುದಾಗಲಿ ಇದೆ ಕಾಲ. ಇನ್ನೊಂದು ವರುಷವೆಂದರೂ ತಡವಾಯಿತು. "

ಅವರು ಒಬ್ಬ ತಂದೆ ಅಥವಾ ಒಬ್ಬ ಕಕ್ಕ ಮಗಳಿಗೆ ಮಾತನಾಡಿದಂತೆ ಮಾತನಾಡತೊಡಗಿದರು. ನನ್ನ ( ವಯಸಿನ ) ಮಟ್ಟಿಗೆ ಬಂದು ಮಾತನಾ ಡಬೇಕಾದರೆ ಅವರಿಗೆ ಮನಸು ಬಿಗಿ ಹಿಡಿದೆ ಮಾತನಾಡಬೇಕಾಯಿತು. ನನ್ನನ್ನು ತಮಗಿಂತ ಕಡಿಮೆಯೆಂದು ತಿಳಿದುಕೊಂಡುದಕ್ಕೆ ನೊಂದುಕೊಂ ಡರೂ ನನಗಾಗಿ ಅವರು ಬೇರೆಯಾಗಿ ನಡಕೊಂಡದ್ದನ್ನು ನೋಡಿ ನಾನು ಹಿರಿಹಿಗ್ಗಿದೆ.

ಆಮೇಲೆ ಸಂಜೆಯೆಲ್ಲ ಕಾವ್ಯಳ ಕೂಡ ಆರ್ಥಿಕ್ಯದ ಬಗೆಗೆ ಮಾತ ನಾಡಿದರು.

" ಒಳ್ಳೆಯದು. ಬರುತ್ತೇನೆ ಹಾಗಾದರೆ. " ಅವರೆಂದರು. ಆಮೇಲೆ ನನ್ನೆಡೆಗೆ ಬಂದು ನನ್ನ ಕೈ ಹಿಡಿದರು.

"ಇನ್ನೆಂದು ಭೆಟ್ಟಿ?" ಎಂದು ಕಾಟ್ಯಾ ಕೇಳಿದಳು.

"ವಸಂತ ಮಾಸದಲ್ಲಿ" ನನ್ನ ಕೈಯಿನ್ನೂ ಅವರ ಕೈಯೊಳಗಿತ್ತು. "ಇನ್ನೂ ನಾನು ಡಾನಿಲೊವಾಕ್ಕೆ (ಇದು ನಮ್ಮ ಇನ್ನೊಂದು ಆಸ್ತಿ) ಹೋಗುವೆನು. ಅಲ್ಲಿಯ ಸ್ಥಿತಿಗತಿ ನೋಡಿ ಏನಾದರೂ ವ್ಯವಸ್ಥೆ ಮಾಡುವುದಿದ್ದರೆ ಮಾಡಿ ಆಮೇಲೆ ಮಾಸ್ಕೊಕ್ಕೆ ನನ್ನ ಕೆಲಸಕ್ಕಾಗಿ ಹೋಗುವೆನು. ಬೇಸಿಗೆಯಲ್ಲಿ ಪುನಃ ಭೆಟ್ಟಿ."

"ಇಷ್ಟು ದಿನಗಳವರೆಗೆ ನಿಮಗಿರಬೇಕಾಗಬಹುದೆ?" ನಾನು ಕೇಳಿದೆ. ನಾನು ಬಹಳ ನೊಂದುಕೊಂಡಿದ್ದೆ. ಅವರನ್ನು ದಿನಾಲು ಕಾಣಬಹುದೆಂದು ಆಶಿಸಿದ್ದೆ. ಅವರು ಹೋಗುವರೆಂಬುದನ್ನು ಕೇಳಿ ಮನಸು ತತ್ತರಿಸಿತು. ಆ ಹಿಂದಿನ ಮರುಕ ಮರಕಳಿಸುವುದೆಂದು ಹೆದರಿಕೆಯಾಯಿತು ನನ್ನ ಮುಖ-ನನ್ನ ದನಿ ಈ ಭಾವವನ್ನು ಹೊರಹೋರಿರಬೇಕು.

"ನೀವು ಏನಾದರೊಂದು ಕೆಲಸದಲ್ಲಿ ನಿಮ್ಮ ಮನಸನ್ನು ಹೆಚ್ಚಿಗಾಗಿ ತೊಡಗಿಸಬೇಕು. ಈ ಬೇಜಾರವೆನಿಸಿಕೊಳ್ಳಕೂಡದು." ಅವರ ದನಿ ಶಾಂತ ಮತ್ತು ವಿರಕ್ತವೆಂದಾಗಿ ನನಗೆನಿಸಿತು. "ವಸಂತ ಕಾಲಕ್ಕೆ ಯಾವುದಾದರೊಂದು ಪರೀಕ್ಷೆಗೆ ನಿಮ್ಮನ್ನು ಕೂಡಿಸೋಣ." ಎಂದೆನ್ನುತ್ತ ಹಿಡಿದ ಕೈಬಿಟ್ಟರು. ನನ್ನೆಡೆಗೆ ನೋಡಲಿಲ್ಲ.

ಹಾಲಿನಲ್ಲಿ ನಾವವರಿಗೆ ಅಪ್ಪಣೆಯಿತ್ತಾಗ ಅವರು ಅವಸರದಿಂದ ನಿಲುವಂಗಿಯನ್ನು ತೊಟ್ಟರು. ಆಗಲೂ ನನ್ನೆಡೆಗೆ ನೋಡುವುದನ್ನು ತಪ್ಪಿಸಿದರು. "ಸುಳ್ಳೆ ದುಃಖಪಡುತ್ತಿರುವರಿವರು!" ನಾನೆಂದುಕೊಂಡೆ. "ನನ್ನೆಡೆಗೆ ನೋಡಲೆಂದು ಇಷ್ಟು ಪರಿ ಹವಣಿಸುತ್ತಿರುವೆನೆಂದು ತಿಳಿದಿರುವರೆ? ಇವರು ಸಜ್ಜನರು. ಒಳ್ಳೆಯ ಸಜ್ಜನರು, ಅಷ್ಟೆ."

ಆ ಸಂಜೆ ನಾನು ಮತ್ತು ಕಾಟ್ಯಾ ಅವರ ಬಗೆಗೆ ಮಾತನಾಡದೆ ನಮ್ಮ ಬೇಸಿಗೆಯ ಕಾರ್ಯಕ್ರಮ, ಮುಂದಿನ ಚಳಿಗಾಲವನ್ನೆಲ್ಲಿ ಕಳೆಯಬೇಕು, ಏನು ಮಾಡಬೇಕು ಮುಂತಾದ ವಿಷಯಗಳನ್ನೆ ಮಾತನಾಡಿದೆವು. ನಾನು ಆ

ಭೀಕರವಾದ ಪ್ರಶ್ನೆ—ಇವೆಲ್ಲವುಗಳಿಂದ ಪ್ರಯೋಜನವೇನು—ಕೇಳುವುದನ್ನು ಬಿಟ್ಟೆ. ಈಗ ಎಲ್ಲವೂ ಸುಸ್ಪಷ್ಟವೂ ಸುಸೂತ್ರವೂ ಆದಂತೆನಿಸಿತು. ಆಯುಷ್ಯದ ಗುರಿ ಸುಖ. ಅದನ್ನು ದೊರಕಿಸುವಂತೆ ನನಗೇ ನಾನು ಮಾತುಕೊಟ್ಟೆ. ಕಳೆಯಿಲ್ಲದ ನಮ್ಮ ಆ ಹಳೆಯ ಮನೆಯಲ್ಲಿ ಎಲ್ಲೆಲ್ಲಿಯೂ ಜೀವಕಳೆ, ಬೆಳಕು ತುಂಬಿಕೊಂಡಂತೆನಿಸಿತು.

## ಪರಿಚ್ಛೇದ ೨.

ವಸಂತ ಋತುವಿನ ಆಗಮನವಾಯಿತು. ನನ್ನ ಆ ಹಿಂದಿನ ಮರುಕ ಇಲ್ಲದಂತಾಗಿ ವಸಂತಕಾಲದ ಜೊತೆಗೆ ಬರುವ ಚಂಚಲತೆ—ಅಸ್ಥಿರ ಆಶೆ ಆಕಾಂಕ್ಷೆಗಳೂ ಕನಸುಗಳೂ ಬಂದುವು. ಚಳಿಗಾಲದಲ್ಲಿ ಮೊದಮೊದಲು ಕಾಲ ಕಳೆದಂತೆ ನಾನು ಕಾಲ ಕಳೆಯದೆ ಪುಸ್ತಕಗಳನ್ನು ಓದತೊಡಗಿದೆ. ಪಿಯಾನೊ ನುಡಿಸತೊಡಗಿದೆ. ನೋನ್ಯಳ ಅಭ್ಯಾಸದಲ್ಲೂ ಲಕ್ಷಹಾಕಿದೆ. ಆಗಾಗ ತೋಟದಲ್ಲಿ ಎಷ್ಟೊ ಹೊತ್ತಿನ ವರೆಗೆ ತಿರುಗಾಡುತ್ತಿದ್ದೆ. ಇಲ್ಲವೆ ಒಂದು ಕಟ್ಟೆಯ ಮೇಲೆ ಕುಳಿತುಕೊಳ್ಳುತ್ತಿದ್ದೆ. ಆಗ ನನ್ನ ವಿಚಾರಗಳು, ಆಶೆ ಆಕಾಂಕ್ಷೆಗಳು ಎಂಥವಿದ್ದಿರಬೇಕೆಂಬುದನ್ನು ದೇವರೆ ಬಲ್ಲ. ಒಮ್ಮೊಮ್ಮೆ ರಾತ್ರಿಯಲ್ಲಿ, ಆಕಾಶದಲ್ಲಿ ಚಂದ್ರನಿದ್ದಾಗ, ನನ್ನ ಮಲಗುವ ಕೋಣೆಯ ಕಿಟಿಕಿಗೆ ಬೆಳಗಾಗುವವರೆಗೆ ಕುಳಿತುಕೊಳ್ಳುತ್ತಿದ್ದೆ. ಒಮ್ಮೊಮ್ಮೆ ಕಾಟ್ಯಳ ಕಣ್ಣು ನನ್ನೆಡೆಗಿಲ್ಲದಾಗ ಒಂದೆ ಒಂದು ಬಟ್ಟೆಯನ್ನು ಧರಿಸಿ ಮೆಲ್ಲನೆ ತೋಟಕ್ಕಿಳಿದು ಕೊಳದವರೆಗೆ ಮಂಜಿನಲ್ಲಿ ಓಡುತ್ತಿದ್ದೆ. ಒಂದು ದಿನ ಬೈಲ ಭೂಮಿಯವರೆಗೆ ಹೋಗಿ ನಮ್ಮ ತೋಟವನ್ನು ಸುತ್ತುಹಾಕಿ ಬಂದೆ.

ಆಗ ನನ್ನ ಮನಸನ್ನಾವರಿಸಿದ ಕನಸುಗಳನ್ನು ನೆನಪಿಗೆ ತರುವುದಾಗಲಿ ಅರ್ಥ ಮಾಡುವುದಾಗಲಿ ನನ್ನಿಂದಾಗದು. ಅವುಗಳನ್ನು ನೆನಪಿಗೆ ತಂದರೂ ಅವು ಹಾಗೇ ಇರಬಹುದೆಂದೂ ನಂಬಲಾರೆ. ಅಷ್ಟು ಅವು ವಿಚಿತ್ರ ಮತ್ತು ಜಗತ್ತಿಗೆ ಹೊರತಾದವುಗಳಾಗಿದ್ದುವು.

ಸರ್ಜಿ ಮಿಕ್ಯಾಲಿಚ್ಯ್ನರು ತಮ್ಮ ವಚನ ಪಾಲಿಸಿದರು. ಮೇ ತಿಂಗಳ ಕೊನೆಗೆ ತಮ್ಮ ಪ್ರವಾಸವನ್ನೆಲ್ಲ ಮುಗಿಸಿಕೊಂಡು ಮರಳಿ ಬಂದರು.

ಅವರ ಮೊದಲ ಭೆಟ್ಟಿಯಾದದ್ದು ಸಂಜೆಗೆ. ಆಗ ನಾವವರನ್ನು ಎದುರುನೋಡುತ್ತಿರಲೆ ಇಲ್ಲ. ಆಗ ನಾವು ವ್ಹರಾಂಡದಲ್ಲಿ ಚಹಾ ಮಾಡುತ ಕುಳಿತಿದ್ದೆವು. ತೋಟವು ಹಸರು ಹಚ್ಚಾಗಿತ್ತು. ಎಲೆ ಬೇಲಿಗಳಲ್ಲಿ ಪೀಟರನೆ ಹಬ್ಬಕ್ಕಾಗಿ ಎಂದು ಬುಲ್‌ಬುಲ್‌ಗಳು ಮನೆಮಾಡಿಕೊಂಡಿದ್ದವು. ಲಿಲ್ಯಕ್ಕದ ಬಳ್ಳಿಗಳು ಬಿಳಿಗೆಂಪೊಡೆದಿದ್ದುವು. ಹೂ ಬಿಡುವ ಲಕ್ಷಣವದು. ಬರ್ಚ ವೃಕ್ಷಗಳ ಸಾಲುಗಳು ಮುಳುಗುವ ಸೂರ್ಯನ ಕಿರಣಗಳಿಂದ ಹೊಳೆಯುತ್ತಿದ್ದುವು. ವ್ಹರಾಂಡದಲ್ಲಿ ನೆಳಲು-ಆರಾಮವಿತ್ತು. ಹುಲ್ಲುಗಾದಿನ ಮೇಲೆ ಸಂಜೆಗೆ ಮಂಜು ದಟ್ಟಾಗಿ ನೆಲೆಸುವುದು ಖಂಡಿತ. ಹೊರಗೆ ತೋಟದಾಚೆ ದಿನದ ಕೊನೆಯ ಕಲಕಲ. ಮನೆಗೆ ಸಾಗಿಸಿದ ದನಕರುಗಳ ಸಪ್ಪಳ-ಕೇಳ ಬರುತಲಿತ್ತು. ಅರೆಹುಚ್ಚು ನಿಕೋನನು ವ್ಹರಾಂಡದ ಬದಿಯ ದಾರಿಯಲ್ಲಿ ನೀರಿನಗಾಡಿ ಹೊಡಕೊಂಡು ನಡೆದಿದ್ದ-ಝುರ್ಝುರಿಯಿಂದ ಸುರಿಯುವ ತಂಪು ನೀರು ಡಾಲಿಯದ ಬಳ್ಳಿ ಬಡ್ಡಿಗಳ ಸುತ್ತ ವರ್ತುಲಗಳನ್ನು ಮಾಡತೊಡಗಿತು. ವ್ಹರಾಂಡದಲ್ಲಿ ತಿಕ್ಕಿ ತಿಕ್ಕಿಟ್ಟ ಚಹಾದ ಪಾತ್ರೆ ಟೇಬಲ್ಲಿನ ಮೇಲಿನ ಬಿಳಿ ಅರಿವೆಯ ಮೈಗೆ ಮಿಂಚಿ ಉಗಿ ತೋರುತ್ತಿತು. ಟೇಬಲ್ಲಿನ ಮೇಲೆ ಪಪ್ಪಡ, ಬಿಸ್ಕಿಟ್ಟು, ಕೆನೆ ಇದ್ದುವು. ಕಾಟ್ಯಾ ತನ್ನ ಮಿಸುನಾದ ಕೈಗಳಿಂದ ಬಟ್ಟಲುಗಳನ್ನು ತೊಳೆಯುತ್ತಿದ್ದಳು. ಜಳಕವಾದ ಮೇಲೆ ಸ್ವಲ್ಪ ಸಹ ತಡೆದು ನಿಲ್ಲದಷ್ಟು ನಾನು ಹಸಿದಿದ್ದೆ. ಆ ದಟ್ಟ ಕೆನೆ ಹಚ್ಚಿ ರೊಟ್ಟಿ ತಿನ್ನತೊಡಗಿದೆ ಮೈಯಲ್ಲಿ ಒಂದು ಸಡಿಲು ತೋಳಿನ ಕಿರಮಿಜಿ ಬಣ್ಣದ ಬ್ಲಾವುಜ ತೊಟ್ಟಿದ್ದೆ. ಕೂದಲುಗಳಿನ್ನೂ ತೊಯ್ದಿದ್ದುವು. ಅವುಗಳಮೇಲೊಂದು ಪಂಜೆ ಕಟ್ಟಿದ್ದೆ. ಕಾಟ್ಯಾ ಅವರಿನ್ನೂ ಒಳಗೆ ಬರುವ ಮೊದಲೆ ನೋಡಿದಳು.

"ಸರ್ಜಿ ಮಿಕೈಲಿಚ್ಸ್, ನೀವು!" ಆಕೆ ಎಂದಳು. "ನಾವು ನಿಮ್ಮ ಮಾತನ್ನೆ ತೆಗೆದಿದ್ದೆವು."

ಬಟ್ಟೆಗಳನ್ನು ಬದಲಿಸಿ ಬರಬೇಕೆಂದು ನಾನೆದ್ದೆ-ಅವರು ನನ್ನನ್ನು ಬಾಗಿಲಲ್ಲಿಯೆ ತಡೆನಿಲ್ಲಿಸಿದರು.

"ಹಳ್ಳಿಯಲ್ಲಿ ಅಲ್ಲದ ಔಪಚಾರಿಕಗಳೇಕೆ?" ನನ್ನ ತಲೆಗೆ ಕಟ್ಟಿದ ಪಂಜೆಯ ಕಡೆಗೆ ನೋಡಿ ನಕ್ಕು ಅವರೆಂದರು, "ನಿಮ್ಮ ಪರಿಚಾರಕರಿದ್ದಾಗ

ಸಂಕೋಚವನ್ನೆನಿಸಿಕೊಳ್ಳುವುದಿಲ್ಲ. ನಿಮ್ಮ ಗ್ರಿಗೊರಿಯಿದ್ದಂತೆ ನಾನೊಬ್ಬ" ಆದರವರು ಗ್ರಿಗೊರಿ ನನ್ನನ್ನೆಂದೂ ನೋಡದ ನೋಟದಿಂದ ನನ್ನನ್ನಾಗ ನೋಡುತ್ತಿದ್ದರೆಂದು ನನಗೆನಿಸಿತು. ನಾನು ಅಸ್ಥಿರಳಾದೆ.

"ನಾನು ಇದೀಗ ಬರುತ್ತೇನೆ" ಎಂದು ಹೇಳಿ ನಾನವರನ್ನು ಬಿಟ್ಟೆ.

"ವ್ಯತ್ಯಾಸವೇನು?" ನನ್ನ ಹಿಂದೆ ಅವರು ನುಡಿದರು.

"ಪ್ರಾಯದ ಬೇಸಾಯಗಿತ್ತಿಗೆ ಸರಿಯಾದ ವೇಷವಿದು."

"ನನ್ನನ್ನು ಎಷ್ಟು ವಿಚಿತ್ರವಾದ ನೋಟದಿಂದ ನೋಡಿದರು" ಮೇಲು ಪ್ಪರಿಗೆಯಲ್ಲಿ ಬಟ್ಟೆ ಬದಲಿಸುವಾಗ ನಾನೆಂದುಕೊಂಡೆ. "ಅವರು ಬಂದು ದರಲ್ಲಿ ನನಗಾನಂದವಿದೆ. ಇನ್ನೇನಾದರೂ ಸ್ವಾರಸ್ಯ ಬರಬಹುದು ಎಲ್ಲದ ರಲ್ಲಿ." ಕನ್ನಡಿಯಲ್ಲಿ. ನೋಡಿಕೊಂಡು ಕೆಳಗೆ ವ್ಹರಾಂಡದೆಡೆಗೋಡಿದೆ ನನಗೆ ತೇಕುಹತ್ತಿತ್ತು. ನನ್ನ ಅವಸರವನ್ನು ನಾನು ಮರೆಮುಚ್ಚಲಿಲ್ಲ. ಅವರು ಟೇಬಲ್ಲಿನೆದುರಿಗೆ ಕಾತ್ಯೆಳ ಕೂಡ ನಮ್ಮ ಆರ್ಥಿಕ್ಯದ ಬಗೆಗೆ ಮಾತ ನಾಡುತ್ತಿದ್ದರು. ನನ್ನೆಡೆಗೆ ನೋಡಿ ನಕ್ಕರು. ಮತ್ತೆ ಮಾತನಾಡತೊಡಗಿ ದರು. ಅವರ ಮಾತಿನಂತೆ ನಮ್ಮ ಆರ್ಥಿಕ್ಯವೆಲ್ಲ ಅಚ್ಚುಕಟ್ಟಾಗಿತ್ತು. ಬೇಸಿ ಗೆಯನ್ನು ಹಳ್ಳಿಯಲ್ಲಿ ಕಳೆದು ಸೋನ್ಯಳ ಶಿಕ್ಷಣಕ್ಕಾಗಿ ಪೀಟರ್ಸಬರ್ಗಿಗೆ ಅಥವಾ ಹೊರದೇಶಕ್ಕೆಲ್ಲಾದರೂ ನಾವು ಹೋಗುವುದು ಶಕ್ಯವಾಗಿತ್ತು.

"ನಮ್ಮ ಜೊತೇಲಿ ನೀವೂ ಬರಬಹುದಾದರೆ—" ಕಾತ್ಯಾ ಎಂದಳು. "ನೀವು ಇಲ್ಲದೆ ದಿಕ್ಕು ತಪ್ಪಿ ಹೋಗುವುದು ನಮ್ಮದು."

"ನಿಮ್ಮ ಜೊತೆಯಲ್ಲಿ ಜಗತ್ತು ಸುತ್ತುಗಟ್ಟಬೇಕೆಂದು ಎಷ್ಟು ಹವ ಣಿಕೆಯಿದೆ." ಅರ್ಧ ಚೇಷ್ಟೆ ಅರ್ಧ ನಿಜ ಎಂದಾಗಿ ಅವರೆಂದರು.

"ಒಳ್ಳೆಯದು." ನಾನೆಂದೆ; "ಹೊರಟೇಬಿಡೋಣ ಜಗತ್ತು ಸುತ್ತು ಗಟ್ಟಲಿಕ್ಕೆ"

ಅವರು ನಕ್ಕು ತಲೆ ಅಲ್ಲಾಡಿಸಿದರು.

"ನನ್ನ ತಾಯಿಯ ಗತಿಯೇನು ? ನನ್ನ ಕೆಲಸದ ಗತಿಯೇನು ? " ಅವರೆಂದರು. "ಅದೀಗಿನ ಪ್ರಶ್ನೆಯಲ್ಲ, ನೀವು ವೇಳೆ ಹೇಗೆ ಕಳೆಯುವಿರಿ ? ಮರುಕ ಬೇಜಾರಗಳಿರಲಿಕ್ಕಿಲ್ಲವಲ್ಲ ? "

ನಾನು ಅವರಿಲ್ಲದಾಗ ಕೆಲಸದಲ್ಲಿ ತೊಡಗಿದ್ದೆ. ಬೇಜಾರವೇನೂ ಎನಿಸಿಕೊಳ್ಳಲಿಲ್ಲವೆಂದು ಹೇಳಿದಾಗ, ಕಾಟ್ಯಾ ನನ್ನ ಹೇಳಿಕೆಗೆ ಬೆಂಬಲ ಕೊಟ್ಟಾಗ ತಮಗೆ ಒಳ್ಳೆ ಅಧಿಕಾರವಿದ್ದಂತೆ ನನ್ನ ಬೆನ್ನು ಚಪ್ಪರಿಸಿದರು. ಅವರ ಮಾತು, ಅವರ ನೋಟ, ಒಂದು ಎಳೆಮಗುವಿಗೆ ಉದ್ದೇಶಿಸಿದಂತೆ ಬಲು ಮೆತ್ತನಾಗಿದ್ದುವು. ನಾನು ಮಾಡಿದ ಒಳ್ಳೆ ಕೆಲಸಗಳ ಬಗೆಗೆ ವಿಸ್ತಾರವಾಗಿ ಸ್ಪಷ್ಟವಾಗಿ ಹೇಳಬೇಕೆಂದೆನಿಸಿತು. ಅವರಿಗೆ ಬೇಡಾದುದನು ಮಾಡಿದುದಕ್ಕೂ ಹೇಳಬೇಕೆಂದೆನಿಸಿತು. ದೇವರ ಗುಡಿಯಲ್ಲಿ ಕುಳಿತಿದ್ದೆನೊ ಏನೊ. ಸಂಜೆ ಅದೆಷ್ಟು ಸುಂದರವಾಗಿತ್ತು. ನಾವು ಚಹಾ ಮುಗಿದ ಮೇಲೂ ವ್ಹರಾಂಡದಲ್ಲಿಯೆ ಕುಳಿತೆವು. ಮಾತು ಕತೆಯಲ್ಲಿ ನನಗೆ ಒಳ್ಳೆಯ ಸ್ವಾರಸ್ಯವಾಯಿತು. ತುಸು ಹೊತ್ತಿನಲ್ಲಿ ನಾವು ಒಳಮನೆಯಲ್ಲಿ ನಡೆದ ಆಳುಮಕ್ಕಳ ಗಲಿಬಿಲಿಯನ್ನು ಕೂಡ ಲಕ್ಷಿಸದಾದೆವು. ಹೂಗಳ ಸುವಾಸನೆ ಬಲವಾಗಿ ನಾಲ್ಕೂ ಕಡಿಂದ ಮುಸುಕಿತು. ಹುಲ್ಲುಗಾಡು ಮಂಜಿನಿಂದ ತೊಯ್ದು ತಪ್ಪಡಿಯಾಯಿತು. ಹತ್ತಿರದಲ್ಲಿಯೆ ಒಂದು ಬುಲ್‌ಬುಲ್ ಪಕ್ಕಿ ಲಿಲ್ಯಾಕ್‌ದ ಝುಡುಪಿನಲ್ಲಿ ದನಿಯೆತ್ತಿತು, ನಮ್ಮ ದನಿ ಕೇಳಿ ತಡೆದಿತು. ನಮ್ಮ ತಲೆಯಮೇಲಿನ ಮುಗಿಲು ಕೆಳಗಿಳಿದಂತೆನಿಸಿತು.

ಹೊತ್ತು ಮುಳುಗುತ್ತ ನಡಿದಿತ್ತು. ನನ್ನ ಲಕ್ಷ್ಯಕ್ಕದು ಬರುತ್ತಿರಲಿಲ್ಲ. ಒಂದು ಕಪ್ಪಡಿಯು ವರಾಂಡದ ಮೇಲ್ಛುಪಿಯಲ್ಲಿ ಹಾರಾಡುತ್ತಿದುದು ನನ್ನ ಬಿಳಿ ಹೊದಿಕೆಯ ಸುತ್ತ ಹಾರಾಡತೊಡಗಿತು. ನಾನು ಗೋಡೆಗಂಟು ಕೊಂಡೆ–ಚೀರಿಕೊಂಡೆ. ಆ ಕಪ್ಪಡಿಯು ಸಪ್ಪಳ ಮಾಡದೆ ಮೇಲ್ಛುಪಿಯಿಂದ ಹೊರನುಗ್ಗಿ ತೋಟದಲ್ಲಿಯ ಅರೆಗತ್ತಲಲ್ಲಿ ಕಾಣದಂತಾಯಿತು.

"ಈ ನಿಮ್ಮ ಸ್ಥಳದಲ್ಲಿ ನನಗೆಷ್ಟು ಸೇರಿಕೆ." ಅವರು ಮಾತಿನ ಓಘ ಬದಲಿಸಬೇಕೆಂದೆಂದರು. "ಈ ವ್ಹರಾಂಡದಲ್ಲಿ ಕುಳಿತುಕೊಂಡು ಇಡಿ ಆಯುಷ್ಯವನ್ನು ಕಳೆಯಬಹುದಾಗಿದ್ದರೆ–"

“ ಹಾಗೆ ಮಾಡಬೇಕು! ” ಕಾಟ್ಯಾ ಎಂದಳು.

“ ಅದಂತೂ ಸರಿ, ” ಅವರೆಂದರು, “ ಆಯುಷ್ಯವು ಕುಳಿತರೆ ಸಾಗುವುದಲ್ಲ. ”

“ ನೀವು ಮದುವೆಯೇಕಾಗುವುದಿಲ್ಲ ? ” ಕಾಟ್ಯಾ ಕೇಳಿದಳು. “ ನೀವು ಒಳ್ಳೆಯ ಗಂಡನಾಗುವಿರಿ. ”

“ ಯಾಕೆ ? ಕುಳಿತಲ್ಲಿಯೆ ಕೂಡುವೆನೆಂದೊ ? “ ಅವರು ನಕ್ಕರು. ” ಊಂ ಹೂಂ–ಕ್ಯಾಟರೀನಾ ಕಾರ್ಲೊವ್ನಾ, ನನಗೆ ಮತ್ತು ನಿಮಗೆ ಮದುವೆಯ ವಯಸು ಮೀರಿಹೋಗಿದೆ. ಮದುವೆಯಾಗುವವರಲ್ಲಿ ನನ್ನನ್ನೆಣಿಸುವುದನ್ನು ಜನರೆಂದೋ ಬಿಟ್ಟುಬಿಟ್ಟಿದ್ದಾರೆ. ನನಗೂ ಹಾಗೆನಿಸುವುದು. ಆ ಮಾತು ಗಟ್ಟಿಯಾದಂದಿನಿಂದ ನಾನು ಸ್ವಸ್ಥನಾಗಿರುವೆನು. ”

ಅವರಿದನ್ನು ಅಸ್ವಾಭಾವಿಕವಾಗಿ ಒತ್ತಿ ಒತ್ತಿ ಹೇಳಿದಂತೆನಿಸಿತು.

“ ಛೀ ! ಇದೇನು ಮಾತು ! ” ಕಾಟ್ಯಾ ಎಂದಳು “ ಮೂವತ್ತಾರು ವಯಸಿನವರಿಗೆ ಮುದಿತನವಂತೆ. ”

“ ಮುದಿತನವೆ ಮತ್ತೆ. ” ಅವರು ಮಾತು ಸಾಗಿಸಿದರು, “ ಕುಳಿತಲ್ಲಿಯೆ ಕುಳಿತುಕೊಳ್ಳಬಯಸುವವನಿಗೆ, ಮದುವೆಯಾಗಲಿರುವವನಿಗೆ ಅಷ್ಟರಿಂದಾಗದು. ಇವರನ್ನು ಕೇಳಿ ನೋಡಿರಿ, ” ನನ್ನೆಡೆಗೆ ತಲೆ ಅಲ್ಲಾಡಿಸಿದರು; “ ಇವರ ವಯಸಿನವರು ಮದುವೆಯಾಗತಕ್ಕದ್ದು. ನಾನೂ ನೀವೂ ಇವರ ಸುಖ ನೋಡಿ ಸುಖಿಯಾಗತಕ್ಕದ್ದು.

ಅವರ ದನಿಯಲ್ಲಿ ತುಂಬಿದ ವಿಷಾದ ಸಂಯಮಗಳು ನನಗೆ ಹೊಳೆಯದಿರಲಿಲ್ಲ. ಅವರು ತುಸು ಸುಮ್ಮನಿದ್ದರು. ಕಾಟ್ಯಳಾಗಲಿ ನಾನಾಗಲಿ ಮಾತನಾಡಲಿಲ್ಲ.

“ ಇದೆ ನೋಡಿರಿ, ” ಅವರು ತಮ್ಮ ಸ್ಥಳದಲ್ಲಿಯೆ ತುಸು ಅಲೆದಾಡಿ ಮುಂದೆ, ಸಾಗಿದರು; “ ಏನೊ ಒಂದು ದುರ್ಘಟನೆಯಿಂದ ನಾನೊಬ್ಬ ಹದಿನೇಳು ವಯಸಿನ ಹುಡಿಗೆಯನ್ನು ಮದುವೆಯಾದೆನೆಂದೆನ್ನೋಣ. ಬೇಕಾ

ದರೆ ಈ ಮಾತಳನ್ನು—ಕ್ಷಮಿಸಿರಿ, ಈ ಮಾರ್ಯಾ ಅಲೆಕ್ಸಾಂಡ್ರೊವ್ನರನ್ನೆ ಎಂದೆನ್ನೋ ಉದಾಹರಣೆ ಚೆನ್ನಾಗಿದೆ; ಅದೆ ಓಘಕ್ಕೆ ಬಂದುದರಲ್ಲಿ ನನಗಾನಂದ; ಇದಕ್ಕೂ ಹೆಚ್ಚಿನ ಉದಾಹರಣೆ ಸಿಕ್ಕಲಾರದು "

ನಾನು ನಕ್ಕು ಬಿಟ್ಟೆ. ಅವರಿಗಾನಂದವೇಕಾಯಿತೊ ಓಘಕ್ಕೆ ಬಂದುದೇನೊ ನನಗೆ ತಿಳಿಯದಾಯಿತು.

"ನನಗೆ ಪ್ರಮಾಣ ಮಾಡಿ ನಿಮ್ಮ ಎದೆಯಮೇಲೆ ಕೈಯಿಟ್ಟು ಹೇಳಿರಿ ಕುಳಿತಲ್ಲಿಯೆ ಕುಳಿತುಕೊಳ್ಳಬಯಸುವ ಒಬ್ಬ ಬರಲಾದ ಮುದಿಯ ಜೊತೆಗೆ ನಿಮ್ಮ ಆಯುಷ್ಯವು ಕೂಡಿಕೊಂಡರೆ ಅದು ಕುಯೋಗವಲ್ಲದೆ ಮತ್ತೇನು ? ಆ ನಿಮ್ಮ ಎದೆಯಲ್ಲಿ ಆಕಾಂಕ್ಷೆಗಳಾವು ಉಬ್ಬಸಬಡುತ್ತಿರಬಹುದೆಂಬುದನ್ನು ದೇವರೆ ಬಲ್ಲ."

ನನಗೆ ಅಸ್ವಸ್ಥತೆಯೆನಿಸಿ ಸುಮ್ಮನಿದ್ದೆ. ಉತ್ತರವೇನು ಕೊಡಬೇಕೆಂಬುದನ್ನರಿಯದಾದೆ.

"ನಾನೀಗ ಮದುವೆಯಾಗುವ ಬಗೆಗೆ ಕೇಳುವುದಿಲ್ಲ." ಅವರೆಂದರು ನಗುತ್ತ, "ಆದರೂ ಮುಚ್ಚಂಜೆಗೆ ನೀವು ಒಬ್ಬರೆ ವಾಟಿಕೆಯಲ್ಲಿ ತಿರುಗಾಡುತ್ತಿರುವಾಗ ಕಣಸಿನಲ್ಲಿ ಕಾಣಬಹುದಂಥ ಗಂಡನೆ ನಾನು ? ಅದು ಕುಯೋಗವಾದೀತು. ಅಲ್ಲವೆ ? "

"ಊಂಹೂಂ—ಅದು ಕುಯೋಗವಲ್ಲ." ನಾನು ಪ್ರಾರಂಭಿಸಿದೆ.

"ಆದರೂ ಸರಿಯಾದುದಲ್ಲ." ಅವರು ನನ್ನ ಮಾತು ಮುಗಿಸಿದರು.

"ಹಾಗೂ ಇದ್ದಿರಬಹುದು. ಆದರೆ ನನ್ನದೂ ತಪ್ಪು ತಿಳಿವಳಿಕೆಯಾಗಬಹುದು." ಅವರು ಮತ್ತೆ ನನ್ನನ್ನು ತಡೆನಿಲ್ಲಿಸಿದರು.

"ಇಲ್ಲಿಯೆ ನೋಡಿರಿ ! ಇವರಾಡಿದ್ದು ಸರಿಯಾದದ್ದು. ಇವರ ಸ್ಪಷ್ಟೋಕ್ತಿಗಾಗಿ ನಾನು ಋಣಿಯಾಗಿದ್ದೇನೆ. ಈ ಮಾತು ಕತೆಯಾದುದರಲ್ಲೂ ನನಗಾನಂದ. ಆದರೂ ಇನ್ನೊಂದು ಹೇಳುವುದಿದೆ." ಅವರೆಂದರು. "ನನ್ನ ಬಗೆಗೆ ಅದೊಂದು ದೊಡ್ಡ ಅನಾಹುತ."

“ ಅದೆಷ್ಟು ವಿಚಿತ್ರರಿರುವಿರಿ ! ನಿಮ್ಮಲ್ಲಿ ಎಳ್ಳಷ್ಟೂ ಬದಲಾಗಿಲ್ಲವಲ್ಲ.” ಕಾಟ್ಯಾ ಎಂದಳು. ಆಮೇಲೆ ಭೋಜನವ ಸಿದ್ಧತೆಗಾಗಿ ವ್ಹರಾಂಡ ಬಿಟ್ಟು ನಡೆದಳು.

ಆಕೆ ಹೋದ ಬಳಿಕ ನಾವಿಬ್ಬರೂ ಸುಮ್ಮನಿದ್ದೆವು. ಸುತ್ತಲೂ ಶಾಂತತೆಯಿತ್ತು. ಒಂದೇ ಒಂದು ವ್ಯತ್ಯಾಸ. ಒಂದು ಬುಲ್‌ಬುಲ್ ಪಕ್ಷಿಯು ಹಿಂದಿನ ರಾತ್ರಿಯೆಲ್ಲ ತಡೆತಡೆದು ಹಾಡಿ ಈಗ ತೋಟವನ್ನು ಹಾಡಿನ ಮಳೆಗರೆದು ತುಂಬಿಬಿಟ್ಟಿತು. ಹಿಂದಿನ ಸಂಜೆಯಿಂದ ಬಾಯಿದೆರೆಯದ ಮತ್ತೊಂದು ಬುಲ್‌ಬುಲ್ ಪಕ್ಷಿಯು ದೂರ ಕೊಳ್ಳದಿಂದ ಉತ್ತರ ಕೊಟ್ಟಿತು. ಹತ್ತಿರದ ಹಕ್ಕಿ ಅದನ್ನಾಲಿಸುವವಕ್ಕಾಗಿಯೋ ಏನೋ ತುಸು ತಡೆದು ಮತ್ತೆ ಮೊದಲಿಗಿಂತ ಗಟ್ಟಿಯಾಗಿ ತನ್ನ ಹಾಡನ್ನು ಸಾಗಿಸಿತು. ಎದೆ ಕರಗಿಸುವ ಆಲಾಪಗಳಿಂದ ಆ ಹಕ್ಕಿಗಳ ದನಿಯಲ್ಲಿ ಒಂದು ಮಹತ್ತರ ಶಾಂತತೆಯಿದ್ದಿತು. ರಾತ್ರಿಯ ಸಾಮ್ರಾಜ್ಯದಲ್ಲಿ ಅಲೆದಾಡುತ್ತಿದ್ದುವವು. ಅವವರ ಸೊತ್ತಿನದು, ಮಾನವರದಲ್ಲ. ಹತ್ತಿರವೆ ತೋಟಿಗನು ‘ಹಸರುಮನೆ’ ಯೆಂದಿದ್ದ ತನ್ನ ಮಲಗುವ ಕೊಠಡಿಗೆ ನಡೆದಿದ್ದನು. ಆತನ ದಪ್ಪ ಬೂಟುಗಳ ಸಪ್ಪಳ ದಾರಿಯುದ್ದಕ್ಕೆ ಅಸ್ಪಷ್ಟವಾಗುತ್ತ ನಡೆದಿತ್ತು. ಮರಡಿಯ ತಳಕ್ಕೆ ಯಾರೋ ಎರಡು ಸಲ ಕರ್ಕಶವಾಗಿ ಶ್ಶಿಳ್ಳು ಹಾಕಿದರು. ಆಮೇಲೆ ಎಲ್ಲೆಲ್ಲಿಯೂ ಶಾಂತತೆ. ಎಲೆಗಳ ಸಳಪಳ ಅಷ್ಟೇ ಕೇಳಬರುತ್ತಲಿತ್ತು. ವ್ಹರಾಂಡದ ಹುಸಿ ಚಟಗುಟ್ಟಿತು. ಗಾಳಿಯಲ್ಲಿ ಸುಳಿಯುತ್ತಿದ್ದ ಒಂದು ಸೂಕ್ಷ್ಮ ಸುವಾಸನೆ ವ್ಹರಾಂಡದಲ್ಲಿಳಿದು ತುಂಬಿಬಿಟ್ಟಿತು. ನಡೆದ ಮಾತುಕತೆಯ ನಂತರದ ಸ್ತಬ್ಧತೆ ಹೇಗೋ ಎಂದೆನಿಸಿತು. ಆವರೆ ತಿರುಗಿ ಏನು ಮಾತನಾಡಬೇಕೆಂಬುದು ನನಗೆ ತಿಳಿಯದಂತಾಯಿತು. ನಾನವರೆಡೆಗೆ ನೋಡಿದೆ. ಅವರ ಕಣ್ಣುಗಳು ಆ ಅರೆಗತ್ತಲಲ್ಲಿ ಹೊಳೆಯುವಂಥವು, ನನ್ನೆಡೆಗೆ ಹೊರಳಿದುವು.

“ ಆಯುಷ್ಯವು ಅದೆಷ್ಟು ಸುಂದರವಿರುವದು.” ಅವರೆಂದರು.

ನಾನು ನಿಟ್ಟುಸಿರು ಬಿಟ್ಟೆ- ಯಾಕೆ ಎಂಬುದನ್ನು ನಾನರಿಯಲಿಲ್ಲ.

“ ಅದೇನು? ” ಅವರು ಕೇಳಿದರು.

“ ಆಯುಷ್ಯವು ಸುಂದರವಿರುವದು. ” ಅವರು ನುಡಿದುದನ್ನೆ ನಾನು ಒಡನುಡಿದೆ.

ನಾವು ಮತ್ತೆ ಸುಮ್ಮನಾದೆವು; ಮತ್ತೆ ನಾನು ಅಸ್ವಸ್ಥಳಾದೆ. ಅವರು ತಮಗೆ ವಯಸಾಗಿದೆ ಎಂದು ಹೇಳಿದ ಮಾತಿಗೆ ಒಪ್ಪಿ ನಾನವರ ಮನಸು ನೋಯಿಸಿದೆಂದೆನಿಸಿತು. ಅವರನ್ನು ಸಮಾಧಾನಗೊಳಿಸಬೇಕೆಂದೆ. ಹೇಗೆ ಎಂಬುದನ್ನರಿಯದಾಗಿದ್ದೆ.

"ಇನ್ನು ಅಪ್ಪಣೆ ತೆಗೆದುಕೊಳ್ಳಬೇಕಾಯಿತು." ಏಳುತ್ತ ಅವರೆಂದರು; "ನಮ್ಮ ತಾಯಿ ನನ್ನನ್ನು ಕಾಯ್ದುಕೊಂಡಿರಬಹುದು. ಭೋಜನಕ್ಕೆಂದು ಇಡೀ ದಿನ ಆಕೆಯನ್ನು ಕಂಡಿಲ್ಲ."

"ಒಂದು ಹೊಸ ಗೀತೆಯನ್ನು ನುಡಿಸಿ ತೋರಿಸಬೇಕೆಂದಿದ್ದೆ." ನಾನೆಂದೆ.

"ಅದು ಹಾಗೇ ಇರಲಿ." ಅವರು ಉತ್ತರ ಕೊಟ್ಟರು. ಅವರು ವಿರಕ್ತ ಭಾವದಿಂದಲೇ ಮಾತನಾಡಿದರೆಂದು ನನಗೆನಿಸಿತು.

"ಬರುತ್ತೇನೆ ಹಾಗಾದರೆ."

ಅವರನ್ನು ನಾನು ನೋಯಿಸಿರಬೇಕೆಂಬುದು ಹೆಚ್ಚು ದೃಢವಾಯಿತೆಂದು ನನಗನಿಸಿತು. ನಾನು ನೊಂದುಕೊಂಡೆ. ಅವರನ್ನು ಕಳಿಸುವುದಕ್ಕೆಂದು ನಾನು ಮತ್ತು ಕಾಟ್ಯಾ ಮೆಟ್ಟಲವರೆಗೆ ಹೋದೆವು. ಬಯಲಲ್ಲಿ ಎಷ್ಟೋ ಹೊತ್ತಿನವರೆಗೆ ನಿಂತಿದ್ದೆವು. ಅವರು ನಮಗೆ ಕಾಣದಂತಾಗುವವರೆಗೆ ದಾರಿಯ ಕಡೆಗೆ ನೋಡುತ್ತ ಅವರ ಕುದುರೆಯ ಖುರಗಳ ಸಪ್ಪಳ ಕೇಳದಂತಾದ ನಂತರ ನಾನು ಮನೆ ಸುತ್ತು ಹಾಕಿ ವ್ಹರಾಂಡಕ್ಕೆ ಹೋದೆ, ತೋಟದೆಡೆಗೆ ನೋಡುತ್ತ ಕುಳಿತುಕೊಂಡೆ. ಆ ಮಂಜಿನಲ್ಲಿ ಮುಸುಕಿದ ರಾತ್ರಿಯ ಸಪ್ಪಳದಲ್ಲಿ ನಾನು ನೋಡಬೇಕೆಂಬುದನ್ನು--ಕೇಳಬೇಕೆಂಬುದನ್ನು ಎಷ್ಟೋ ಹೊತ್ತಿನವರೆಗೆ ನೋಡುತ್ತ ಕೇಳುತ್ತ ಕುಳಿತುಕೊಂಡಿದ್ದೆ.

ಅವರು ಎರಡನೆಯ ಸಲ ಬಂದರು; ಮೂರನೆಯ ಸಲವೂ ಆ ದಿನದ ಆ ವಿಚಿತ್ರ ಮಾತುಕತೆಗಳಿಂದ ಬಂದ ಸಂಕೋಚವು ಬರಬರುತ್ತ ಇಲ್ಲದಂತಾಯಿತು. ಆ ಬೇಸಿಗೆಯಲ್ಲಿ ಅವರು ವಾರದೊಳಗೆ ಎರಡು ಸಲ ಮೂರು ಸಲ ಬರುತ್ತಿದ್ದರು. ಅವರ ಬರುವಿಕೆಯೊಂದು ರೂಢಿಯಾಗಿತ್ತು. ನನ್ನ ಬಗೆಗೆ

ಅವರೊಂದು ದಿನ ಬಾರದಿದ್ದರೆ ಏನೋ ತಪ್ಪಿತಪ್ಪಿದಂತೆನಿಸುತ್ತಿತ್ತು. ಸಿಟ್ಟು ಬರುತ್ತಿತ್ತು. ನನ್ನನ್ನು ನಿರ್ದಾಕ್ಷಿಣ್ಯವಾಗಿ ಬಿಟ್ಟುಬಿಟ್ಟಂತೆನಿಸಿತು. ಅವರು ನನ್ನನ್ನು ತಮ್ಮ ಸಹಚರನಾದ ಒಬ್ಬ ಹುಡುಗನೆಂದೆಣಿಸುತ್ತಿದ್ದರು. ಪ್ರಶ್ನೆ ಕೇಳಿ ನಿಃಸಂಕೋಚವಾದ ಉತ್ತರಗಳನ್ನು ಬಯಸುತ್ತಿದ್ದರು. ಅನೇಕ ಸೂಚನೆಗಳನ್ನು ಮಾಡಿ ಹುರುಪು ಕೊಟ್ಟು ಒಮ್ಮೊಮ್ಮೆ ಬೈದು ಕಟ್ಟುಗಳನ್ನು ಹಾಕುತ್ತಿದ್ದರು. ನನ್ನ ಮೆಟ್ಟಿಗೆ ತಾವು ಉಳಿಯುವ ಅವರ ಈ ಯತ್ನಗಳಾಚೆ ನಾನರಿಯದಾದ ನನ್ನ ನೋಟಕ್ಕಣಿಯಾಗದ ಗೂಢಭಾವವೊಂದಿದ್ದಂತಿತ್ತು. ಅದಕ್ಕಾಗಿಯೇ ನನ್ನಲ್ಲಿ ಅವರ ಬಗೆಗೆ ಆದರ ಒಲವುಗಳಿದ್ದುವು. ಕಾಟ್ಯಳಿಂದ ಮತ್ತು ನಮ್ಮ ಕೆಲ ನೆರೆಯವರಿಂದ ತಮ್ಮ ತಾಯಿಯ ಬಗೆಗೆ ಆಸ್ಥೆ—ನಮ್ಮ ತಮ್ಮ ಆರ್ಥಿಕ್ಯಗಳ ವ್ಯವಸ್ಥೆ ಕೆಲವು ಸಾರ್ವಜನಿಕ ಕೆಲಸಗಳ ಕಾರ್ಯಭಾರ ಮುಂತಾದವುಗಳಿಂದ ಅವರು ಬೇಜಾರಾಗಿದ್ದರೆಂದು ತಿಳಿದುಬಂದಿತು. ಆದರೆ ಇವೆಲ್ಲವುಗಳ ಬಗೆಗೆ ಅವರ ವಿಚಾರಗಳೇನು, ಯೋಜನೆಗಳಾವು, ಮುಂದಿನ ಧೋರಣೆಯೆಂತು ಮುಂತಾದುದನ್ನು ಅವರಿಂದಲೇ ತಿಳಿದುಕೊಳ್ಳುವದಸಾಧ್ಯವಿತ್ತು. ನನಗೆ ಅವರ ಬಗೆಗೆ ಏನಾದರೊಂದು ಮಾತು ಹೊರಡಿಸಿದರೆ ತತ್ಕ್ಷಣ ಮೋರೆಗೆ ಗಂಟಿಕ್ಕಿ ನನಗೆ ಸೂಚನೆಯೋ ಏನೋ, "ಹಾಂ! ತಡೆ ಅದು ನಿನ್ನ ತುತ್ತಲ್ಲ." ಎಂದು ಮಾತು ಹೊರಳಿಸಿಯೆ ಬಿಡುತ್ತಿದ್ದರು ಮೊದಮೊದಲು ನಾನು ನೊಂದುಕೊಳ್ಳುತ್ತಿದ್ದೆ. ಕೆಲ ದಿನಗಳಲ್ಲಿ ನಮ್ಮ ಆರ್ಥಿಕ್ಯವನ್ನು ಬಿಟ್ಟು ಸರಿದಾಡದಂತೆ ಮಾತು ಸಾಗಿಸುವ ರೂಢಿಯಾಯಿತು. ಎಲ್ಲವೂ ಯಥಾಕ್ರಮವೆಂದಾಯಿತು.

ಇನ್ನೊಂದು ಮಾತು. ಮೊದಮೊದಲು ಸರಿಬಾರದ್ದಾಗಿ ಮುಂದೆ ಸರಿಯೆಂದೆನಿಸಿದ್ದು, ನನ್ನ ಇಡುನಡೆಗಳ ಬಗೆಗೆ ಅವರಲ್ಲಿದ್ದ ಅನಾಸ್ಥೆ, ತಿರಸ್ಕಾರವೂ ಇದ್ದಿರಬೇಕು. ಮಾತಿನಿಂದಾಗಲಿ ನೋಟದಿಂದಾಗಲಿ ನನ್ನ ಚಲುವಿಕೆಯನ್ನುಸಿರಲಿಲ್ಲ. ಅವರಿದ್ದಾಗ ಆ ಮಾತು ಹೊರಟರೆ ಮೋರೆ ಗಂಟಿಕ್ಕಿ ನಗುವರು. ನನ್ನೆಡೆಗೆ ನೋಡಿ ಮೂಗು ಮುರಿದು ನನ್ನನ್ನು ಕೆಣಕುವುದೂ ಒಂದು ಮೋಜಾಗಿತ್ತವರಿಗೆ. ಹಬ್ಬಹುಣ್ಣಿವೆಯ ದಿನ ಕಾಟ್ಯಾ ನನಗೆ ಒಳ್ಳೆಯ ಉಡುಪು ಕೊಟ್ಟು ಕೂದಲುಗಳನ್ನು ತೀಡಿ ಬಾಚಿ ಸಜ್ಜು ಮಾಡುತ್ತಿದ್ದಳು. ನನ್ನ ಈ ಒನಪಿಗೆ ಅವರಿಂದ ಕೇವಲ ಕುಚೇಷ್ಟೆ. ಹೆಣ್ಣುಗರಳಿನ ಕಾಟ್ಯಾ

ನೊಂದುಕೊಳ್ಳುತ್ತಿದ್ದಳು. ನಾನು ಜಕ್ಕನೆ ಜರೆದುಕೊಳ್ಳುತ್ತಿದ್ದೆ. ಅವರು ನನ್ನ ಕೌತುಕ ಮಾಡಲೇಬೇಕೆಂದು ಕಾಟ್ಯಾ ಪಣ ತೊಟ್ಟಂತಿತ್ತು. ತಾನು ಮೆಚ್ಚಿದ ಹೆಂಗಸು ನೀಟಾಗಿರಬೇಕೆಂದು ಗಂಡಸು ಹವಣಿಸುತ್ತಿರಲಾರ ನೆಂಬುದು ಆಕೆಗೆ ತಿಳಿಯದಾದ ಮಾತು. ಅವರಿಗೆ ಬೇಕಾದುದೇನೆಂಬುದನ್ನು ನಾನು ತಿಳಿದುಕೊಂಡೆ. ನಾನು ಅಲ್ಲದ ಒನಪು ವೈಯಾರ ಮಾಡಲಿಕ್ಕಿಲ್ಲವೆಂಬ ಬಗೆಗೆ ತಾವು ಗಟ್ಟಿ ಮಾಡಿಕೊಳ್ಳುವುದು ಬೇಕಿತ್ತು. ನಾನದನ್ನರಿತುಕೊಂಡು ನನ್ನ ಉಡುಪನ್ನು ಧರಿಸುವದರಲ್ಲಾಯಿತು ಕೂದಲುಗಳನ್ನು ಬಾಚಿಕೊಳ್ಳುವು ದರಲ್ಲಾಯಿತು. ನುಡಿನಡಿಗೆಗಳಲ್ಲಾಯಿತು ವೈಯಾರವೆಂಬುದನ್ನು ಬಿಟ್ಟು ಬಿಟ್ಟಿದ್ದೆ. ಆದರ ಬದಲಾಗಿ ಮತ್ತೊಂದು ಅತಿರೇಕ ತಲೆದೋರಿತು. ಅದೆಂದರೆ ಸಾದಾತನದ ಅತಿರೇಕ. ಸಾದಾತನವನ್ನರಿಯದ ವಯಸಿನಲ್ಲಿ ಸಾದಾತನ. ಅವರು ನನ್ನನ್ನು ಪ್ರೀತಿಸುತ್ತಿದ್ದರೆಂಬುದನ್ನು ನಾನರಿತಿದ್ದೆ. ಅದು ಒಂದು ಮಗು ಎಂದು ತಿಳಿವೋ ಒಬ್ಬ ಹೆಣ್ಣು ಎಂದು ತಿಳಿನೊ ಏನೊ ಎಂಬುದನ್ನು ನಾನು ನನ್ನನ್ನು ಕೇಳಿಕೊಳ್ಳಲಿಲ್ಲ. ಅವರ ಪ್ರೀತಿ ನನಗೆ ಬೆಲೆಯುಳ್ಳದ್ದಾಗಿತ್ತು. ಜಗತ್ತಿನಲ್ಲಿಯ ಉಳಿದ ಎಲ್ಲ ಹೆಣ್ಣಿನ ಗಿಂತ ನಾನು ಮಿಗಿಲೆಂದು ಅವರ ಗ್ರಹಿಕೆಯಾಗಿರಬೇಕೆಂದು ನಾನೆಂದು ಕೊಂಡದ್ದು. ನನ್ನ ಬಗೆಗೆ ಅವರು ಮೋಸ ಹೋಗಲೆಂದು ಅಪೇಕ್ಷಿಸದಿರದಾದೆ. ಮೋಸ ಮಾಡುವ ಅಪೇಕ್ಷೆಯಿಲ್ಲದೆ ಮೋಸ ಮಾಡಿದೆ. ನಾನು ಬದಲು ಹೊಂದುತ್ತ ನಡೆದೆ. ನನ್ನ ಮೈಕಟ್ಟಿನ ಉಡುಪಿನಗಿಂತ ಮೆಚ್ಚುವಂಥ ಗುಣ ಗಳನ್ನೆ ಅವರೆದುರಿಗಿಡುವದು ವಿಹಿತವೆಂದೆಂದುಕೊಂಡೆ. ನನ್ನ ಕೂದಲು, ಕೈ, ಮೋರೆ ನಡೆನುಡಿ ಅವರು ಎಂದೋ ನೋಡಿಕೊಂಡಿಟ್ಟಿದ್ದರು. ಗುರುತ ತಪ್ಪ ದಷ್ಟು ನನ್ನ ಬಾಹ್ಯ ಸ್ವರೂಪದಲ್ಲಿ ಮತ್ತೇತರದಾದರೂ ಜೋಡು ಕೊಡಬಹು ದಾಗಿತ್ತು. ಈ ಮೋಸ ಮಾಡುವ ಹಂಬಲದ ಹೊರತಾಗಿ ನನ್ನ ಮನಸ್ಸನ್ನು, ನನ್ನ ಹೃದಯವನ್ನು ಅವರಿನ್ನೂ ಅರಿತಿರಲಿಲ್ಲ. ಅವರು ಪ್ರೀತಿಸುತ್ತಿದ್ದ ರವನ್ನು ಅವಿನ್ನೂ ಬೆಳವಣಿಗೆಯುಲ್ಲಿದ್ದವು. ಇದೊಂದು ತಿಳಿದನಂತರ ಅವರ ಸಹವಾಸದಲ್ಲಿ ಎಲ್ಲವೂ ಸುಸೂತ್ರವಾದಂತೆನಿಸಿತು. ಕಾರಣವಿಲ್ಲದ ನಾಚಿಕೆ ಅಸಡ್ಡಾಳತನ ಇಲ್ಲ ದಂತಾದುವು. ಎದುರಿನಿಂದ, ಅಡ್ಡ ಕೂತಾಗ, ನಿಂತಾಗ, ಕೂದಲು ಕೆಳಗಿಳಿಸಿ ಬಾಚಿಕೊಂಡಾಗ, ಮೇಲಕ್ಕೇರಿಸಿ ಬಾಚಿಕೊಂಡಾಗ ನೆತ್ತಿಯಿಂದ ಪಾದದವರೆಗೆ

ನನ್ನನ್ನು ಒಂದುಗುರು ಬಿಡದೆ ನೋಡಿದ್ದರು. ಆಗಾಗವರು ನನ್ನನ್ನು ನೋಡಿ ಸಮಾಧಾನಪಟ್ಟಿರಬೇಕೆಂದು ನನ್ನ ಗ್ರಹಿಕೆ. ಅವರು ತಮ್ಮ ವಾಡಿಕೆ ಬಿಟ್ಟು ಇತರರಂತೆ ನನಗೆ "ನಿನ್ನ ಮೋರೆ ಅದೆಷ್ಟು ಚೆಲುವಾಗಿದೆ." ಎಂದು ನುಡಿದಿದ್ದರೆ ನನಗದು ಸರಿಬಾರದ್ದೆ. ಆದರೆ ನಾನೇನಾದರೂ ನುಡಿದರೆ ನನ್ನೆಡೆಗೆ ನೇರವಾಗಿ ನೋಡಿ ತಮ್ಮ ಭಾವವನ್ನು ಉಪಹಾಸದಾಚೆ ಅಡಗಿಸಿ, " "ಅದೆಷ್ಟು ವಿಚಿತ್ರ ಹುಡಿಗೆಯಂತಿರುವಿರಿ ನೀವು? ನಾನು ಹೇಳಬೇಕಾದುದಿದೆ." ಎಂದು ನುಡಿದಾಗ ನನ್ನ ಮನಸ್ಸು ತಣಿಯುತ್ತಿತ್ತು; ನಲಿದಾಡುತ್ತಿತ್ತು.

ನನ್ನಲ್ಲಿ ಆನಂದವನ್ನು ಗರ್ವವನ್ನುಲುಕಿಸುವ ಈ ಮೆಚ್ಚುಗಳಾದರೂ ನನಗೇಕೆ ದೊರೆಯುತ್ತಿದ್ದುವೆಂದೀರಿ? ಕೇವಲ ಮುದುಕ ಗ್ರಿಗೋರಿ ತನ್ನ ಪುಟ್ಟ ಮೊಮ್ಮಗಳನ್ನು ಪ್ರೀತಿಸುವನೆಂದು ಹೇಳಿದ್ದೆಕೊ. ಒಂದು ಕವಿತೆಯನ್ನು ಇಲ್ಲವೆ ಒಂದು ಕತೆಯನ್ನು ಓದುವಾಗ ನನ್ನ ಕಣ್ಣಲ್ಲಿ ನೀರು ತುಂಬಿದುವೆಂದು ಹೇಳಿದ್ದಕ್ಕೊ ಶೂಲ್ಸ್ಟೋಫನ ಸಂಗೀತಕ್ಕಿಂತ ಮೊಝಾನ ಸಂಗೀತದಲ್ಲಿ ನನಗೆ ಹೆಚ್ಚು ಸೇರಿಕೆ ಎಂದು ಹೇಳಿದ್ದಕ್ಕೊ—ಯಾವುದು ಒಳ್ಳೆಯದು, ಮೆಚ್ಚುಗೆಗೆ ಯೋಗ್ಯವಾದದ್ದು ಎಂಬುದನ್ನು ವಿಂಗಡಿಸಲರಿಯದ ನಾನು ತಡವಿಲ್ಲದೆ ಇದು ಒಳ್ಳೆಯದು ಮೆಚ್ಚುಗೆಗೆ ಯೋಗ್ಯವಾದದ್ದೆಂದು ಕಂಡು ಹಿಡಿಯುವುದನ್ನು ನೋಡಿ ನಾನೇ ಅಚ್ಚರಿಗೊಳ್ಳುತ್ತಿದ್ದೆ. ನನ್ನ ಮೊದಲಿನ ಅದೆಷ್ಟೊ ಸೇರಿಕೆ ರೂಢಿಗಳನ್ನು ಅವರು ಮೆಚ್ಚುತ್ತಿರಲಿಲ್ಲ. ನಾನೇನಾದರೂ ಹೇಳಬೇಕೆಂಬುದು ಅವರ ಮನಸಿಗೆಬಾರದ್ದೆಂದು ಕಂಡು ಹಿಡಿಯಲಿಕ್ಕೆ ಅವರ ಒಂದು ನೋಟ, ಹುಬ್ಬಿನ ಒಂದು ಮಿಸುಗಾಟ ಸಾಕಾಗುತ್ತಿತ್ತು. ನನ್ನ ಅಳೆಗೋಲೆ ಬದಲಾಗಿತ್ತು. ಒಮ್ಮೊಮ್ಮೆ ಅವರು ನನಗೆ ಏನಾದರೂ ಸೂಚನೆ ಮಾಡಬೇಕೆಂದಾಗ ಅವರು ಹೇಳಬಹುದಾದ್ದನ್ನು ನಾನು ಮೊದಲೆ ಊಹಿಸುತ್ತಿದ್ದೆ. ಅವರು ಏನಾದರೊಂದು ಕೇಳಿ ನನ್ನ ಮೋರೆಯಕಡೆಗೆ ನೋಡಿದರೆ ಸಾಕು, ನನ್ನಿಂದ ಅವರಿಗೆ ಬೇಕಾದ ಉತ್ತರವು ಹೊರಡುತ್ತಿತ್ತು ನನ್ನ ವಿಚಾರಗಳು ನನ್ನ ಭಾವನೆಗಳು ಆಗ ನನ್ನವಾಗಿದುತ್ತಿರಲಿಲ್ಲ. ಅವುಗಳೆಲ್ಲ ಅವರ ವಿಚಾರ ಭಾವನೆಗಳಿದ್ದು ಒಮ್ಮೆಲೆ ನನ್ನವೆಂದಾಗಿ ನನ್ನಲ್ಲಿ ಬೆರತು ಬೆಳಗುತ್ತಿದ್ದುವು. ನನ್ನನ್ನರಿಯದೆ ಎಲ್ಲವನ್ನು ನಾನು ನೋಡುವ ಬಗೆ ಬದಲಾಗಿತ್ತು—ಕಾಟ್ಯಾ, ಆಳುಮಕ್ಕಳು, ಸೋನ್ಯಾ, ನಾನು, ನನ್ನ ಪುಸ್ತಕ ಎಲ್ಲವನ್ನು

ನೋಡುವ ಬಗೆ ಬೇರೆ. ಬೇಸರವಳಿಯಲೆಂದು ನಾನು ಮೊದಲು ಓದುತ್ತಿರುವ ಪುಸ್ತಕಗಳು ಈ ನನ್ನ ಆಯುಷ್ಯದ ಆನಂದ—ಅವರು ಅವುಗಳನ್ನು ತಂದುಕೊಡುತ್ತಿದ್ದರೆಂದೊ ಅವುಗಳನ್ನು ಓದಿ ನಾವಿಬ್ಬರೂ ವಿಚಕ್ಷಣೆ ಮಾಡುತ್ತಿದ್ದೆವೆಂದೊ, ಸೋನ್ಯಳಿಗೆ ಪಾಠ ಹೇಳುವುದೆಂದರೆ ನನಗೆ ಬಟ್ಟಿಬೇಸರ—ಹೇಳಲಿ ಬೇಕೆಂದು ಹೇಳುತ್ತಿದ್ದೆ. ಒಂದು ದಿನ ಪಾಠ ಹೇಳುವಾಗ ಆವರೂ ಇದ್ದರು—ಅಂದಿನಿಂದ ಸೋನ್ಯಳ ಅಭ್ಯಾಸಕಡೆಗೆ ಲಕ್ಷ ಕೊಡುವುದರಲ್ಲಿ ನನಗೆ ಹಿಗ್ಗು ಹುಟ್ಟಿತು. ಮೊದಲು ನನಗೆ ಒಂದು ಇಡಿ ಸ್ವರಾವಳಿಯನ್ನು ಪಾಠಾಂತರಿಸುವುದಸಾಧ್ಯವೆನಿಸುತ್ತಿತ್ತು. ಈಗ ಒಂದೆ ಒಂದು ಸ್ವರ ಮೇಳವನ್ನು ಬೇಸರವಿಲ್ಲದೆ ತಡೆಯಿಲ್ಲದೆ ನಾಲ್ವತ್ತು ನಾಲ್ವತ್ತು ಸಲ ನುಡಿಸುತ್ತಿದ್ದೆ ಕಾಟ್ಯಾ ಕಂಗೆಟ್ಟು ಕಿವಿಗಳಲ್ಲಿ ಅರಳೆ ತುಂಬಿಕೊಂಡಳು—ಅವರು ನನ್ನ ಸಂಗಿತ ಕೇಳಿ ಆನಂದಪಡುವರೆಂಬುದೊಂದೆ ವಿಚಾರ ನನ್ನಲ್ಲಿ—ಅವೆ ಮೊದಲಿನ ಗೀತಿಗಳು ಬೇರೆಯಾಗಿ ಕಾಣುತ್ತಿದ್ದುವು—ಬೇರೆಯಾದ ಒಪ್ಪ ಹೊಂದಿ ನುಡಿಯುತ್ತಿದ್ದುವು. ನಾನು ಅರಿತಿದ್ದ ನನ್ನ ಎರಡನೆಯ ಉಸಿರಾಗಿದ್ದ ಕಾಟ್ಯಾ ನನ್ನ ಕಣ್ಣಿಗೆ ಬೇರೆಯಾಗಿ ತೋರತೊಡಗಿದಳು. ಆಕೆ ನಮ್ಮ ತಾಯಿ, ಗೆಳತಿ ಸೆರೆಯಾಳಾಗಿರಲಿಕ್ಕೆ ಕಾರಣ ವಿಲ್ಲವೆಂಬುದನ್ನು ನಾನು ಇದೆ ಮೊದಲು ಕಂಡದ್ದು—ತನ್ನನ್ನಳಿದುಕೊಂಡು ನಮ್ಮನ್ನು ಹಚ್ಚಿಕೊಂಡ ಈ ಪ್ರಾಣಿಯ ಋಣದ ಬೆಲೆ ನನಗೀಗ ತಿಳಿಯಿತು. ನಾನು ಹೆಚ್ಚಾಗಿ ಆಕೆಯನ್ನು ಮೆಚ್ಚಿದೆ. ನಮ್ಮ ಜೀತದ ಆಳು, ಆಳುಮಕ್ಕಳು, ಬಾನಗಿತ್ತಿಯರು ಮುಂತಾದವರನ್ನು ಹೊಸ ನೋಟದಿಂದ ನೋಡಲಿಕ್ಕೆ ನನಗೆ ಕಲಿಸಿದರು. ಹಾಗೆ ಒಪ್ಪಿಕೊಳ್ಳುವುದು ಹುಚ್ಚುತನವಿದ್ದೀತು, ಆದರೂ ಹದಿನೇಳು ವರುಷ ಅವರಲ್ಲಿಯೆ ಬೆಳೆದು ನಾನೆಂದೂ ನೋಡದವರನ್ನರಿತುಕೊಂಡಷ್ಟು ಅರಿತುಕೊಂಡಿದ್ದೆ. ಅವರಿಗೂ ಹತ್ತುಗಡೆಯಿದೆ, ಮರುಕವಿದೆ, ಆಶೆಗಳಿವೆ, ಎಂಬುದು ನನ್ನ ಲೆಕ್ಕದಲ್ಲಿಯೆ ಇರಲಿಲ್ಲ. ನಮ್ಮ ಹೊಲಗಳು, ಅಡವಿ, ತೋಟಗಳೆಲ್ಲ, ನಾನು ನೋಡುತ್ತ ಬಂದಿದ್ದುವೆಲ್ಲ ಹೊಸತನಹೊಂದಿ ಅಂದವಾಗಿ ಕಾಣುತ್ತಿದ್ದುವು. ಹೆರವರಿಗಾಗಿ ಹೆಣಗುವುದರಲ್ಲಿ ಸುಖ ಕಟ್ಟಿಟ್ಟಿದ್ದೆಂದವರು ಹೇಳಿದ್ದು ನಿಜವಿತ್ತು. ಆಗ ಆ ಮಾತು ವಿಚಿತ್ರವೆನಿಸಿ ನನ್ನ ಮನವರಿಕೆಗೆ ಒಗ್ಗಲಿಲ್ಲ. ಬರಬರುತ್ತ ನಾನು ವಿಚಾರಮಾಡದೆ—ನನ

ಗದರ ಮನವರಿಕೆಯಾಯಿತು. ನನ್ನ ಜೀವಿತದಲ್ಲಿ ಯಾವ ಬಗೆಯ ಬದಲು ಮಾಡದೆ—ನನ್ನ ಮನೋವ್ಯಾಪಾರದಲ್ಲಿ ತಾವೊಂದು ಬೆರೆತು—ನನ್ನ ಇಂದಿನ ದರಲ್ಲಿಯ ಆನಂದದ ಜಗತ್ತನ್ನೆ ನನ್ನ ಮುಂದಿಟ್ಟರು. ಚಿಕ್ಕಂದಿನಿಂದ ನನ್ನನ್ನಾವರಿಸಿದುದೆಲ್ಲವೂ ಹೇಳದೆ ಕೇಳದೆ ಜೀವಕಳೆ ತುಂಬಿ ನಿಂತಿತು, ಅವ ರನ್ನು ಕಾಣುವದೊಂದೆ ತಡ ವಸ್ತು ಮಾತ್ರವೂ ಮಾತಾಡಿ ನನ್ನ ಹೃದಯದಲ್ಲಿ ಒಳನುಗ್ಗಿ ಅಲ್ಲಿ ಆನಂದವನ್ನು ಬೀರುತ್ತಿತ್ತು.

ಆ ಬೇಸಿಗೆಯಲ್ಲಿ ಮೇಲುಪ್ಪಿರಿಗೆಯಲ್ಲಿದ್ದ ನನ್ನ ಕೋಣೆಯಲ್ಲಿ ನನ್ನ ಹಾಸಿಗೆಯ ಮೇಲೆ ನಾನು ಬಿದ್ದುಕೊಂಡಾಗ ವಸಂತ ಕಾಲದಲ್ಲಿ ಹುಟ್ಟಿದ ಮರುಕ, ಮುಂದಿನ ಆಶೆ ಆಕಾಂಕ್ಷೆಗಳೆಲ್ಲ ಅಳಿದು ಇಂದಿನ ರಸವತ್ತಾದ ಆನಂದವೆ ಅಣಿಯಾಯಿತು. ನಿದ್ರೆ ಬಾರದಾಗಿ ನನ್ನ ಹಾಸಿಗೆಯನ್ನು ಬಿಟ್ಟು ಕಾಟ್ಯಳ ಹಾಸಿಗೆಯಮೇಲೆ ಕುಳಿತು ಆಕೆಗೆ ನಾನೆಷ್ಟು ಸುಖಿಯಾಗಿರುವೆ ನೆಂಬುದನ್ನು ಹೇಳುತಿದ್ದೆ—ಅದು ಅನಾವಶ್ಯಕವಿತ್ತು—ಆಕೆ ತಾನೆ ಅದನ್ನು ಕಂಡುಕೊಳ್ಳ ಬಹುದಾಗಿತ್ತು. ಆದರೆ ಆಕೆ ತನಗದರಲ್ಲಿ ಸಮಾಧಾನ, ಸುಖ ವಿದೆ ಎಂದು ಹೇಳಿ ನನ್ನನ್ನು ಮುತ್ತಿಡುತ್ತಿದ್ದಳು. ನಾನಾಕೆಯನ್ನು ನಂಬು ತ್ತಿದ್ದೆ ಪ್ರತಿಯೊಬ್ಬರು ಸುಖಿಯಾಗಿರಬೇಕೆಂಬುದು ಆವಶ್ಯಕವೆಂದು ನನಗೆನಿ ಸುತ್ತಿತ್ತು. ಆದರೆ ಕಾಟ್ಯಳಿಗೆ ನಿದ್ರೆ ಎಂಬುದೂ ಇತ್ತು; ಆಕೆ ನನಗೆ ಸಿಟ್ಟು ಮಾಡಿದಂತೆ ಮಾಡಿ ನನ್ನನ್ನು ಹೊಡೆದಟ್ಟಿ ತಾನು ನಿದ್ರೆ ಮಾಡುವಳು—ನಾನ ಮತ್ತೆ ಮತ್ತೆ ನಾನೆಷ್ಟು ಸುಖಿಯಾಗಿರುವೆನೆಂದು ವಿಚಾರ ಮಾಡುತ್ತ ಕುಳಿತು ಕೊಳ್ಳುತ್ತಿದ್ದೆ. ಒಮ್ಮೊಮ್ಮೆ ಹಾಸಿಗೆಯಿಂದೆದ್ದು ಮಲಗುವ ಕಾಲದ ಪ್ರಾರ್ಥನೆ ಯನ್ನು ಮತ್ತೆ ಹೇಳುತ್ತಿದ್ದೆ,—ದೇವರು ನನಗಿತ್ತ ಸೌಖ್ಯಕ್ಕಾಗಿ ಆತನನ್ನು ಕೊಂಡಾಡುತ್ತಿದ್ದೆ.

ಕೋಣೆಯಲ್ಲಿ ಎಲ್ಲೆಲ್ಲಿಯೂ ಸಬ್ಬು—ಕಾಟ್ಯಳ ನಿಧಾನವಾದ ಉಸಿರಾಡಿ ಸುವುದೂ ಆಕೆಯ ಹಾಸಿಗೆಯ ಹತ್ತಿರಿದ್ದ ಗಡಿಯಾರದ 'ಟಕ್ ಟಕ್' ಸಪ್ಪಳ ಅಷ್ಟೆ ಕೇಳಬರುತಲಿದ್ದುವು. ನಾನು ನನ್ನ ಹಾಸಿಗೆಯಲ್ಲಿ ಪ್ರಾರ್ಥ ನೆಯ ಅಕ್ಷರಗಳನ್ನುಸಿರುತ್ತ ಕೊರಳಲ್ಲಿಯ ಕ್ರೂಸನ್ನು ಹಣೆಗೆ ಹಚ್ಚಿಕೊಳ್ಳುತ್ತ ಆ ಮಗ್ಗಲಿಂದ ಈ ಮಗ್ಗಲು ಈ ಮಗ್ಗಲಿಂದ ಆ ಮಗ್ಗಲು ಹೀಗೆ ಹೊರ ಳಾಡುತ್ತಿದ್ದೆ. ಕಿಟಕಿ ಬಾಗಿಲುಗಳೆಲ್ಲ ಮುಚ್ಚಿದ್ದವು. ನೊಣವೊ ದೋಮಿಯೊ

ಎಲ್ಲಿಯೊ ರಣಗುಡುತ್ತಿರ ಬೇಕು. ನಾನು ಆ ಕೋಣೆ ಬಿಟ್ಟು ಎಲ್ಲಿಯೂ ಹೋಗ ಬಾರದು—ಎಂದೂ ಬೆಳಗಾಗ ಬಾರದು—ನನ್ನ ಆಗಿನ ಮನಸ್ಥಿತಿ ಎಂದು ಬೇರೆಯಾಗಬಾರದು ಎಂದು ಹೇಳಿಕೊಳ್ಳುತ್ತಿದ್ದೆ. ನನ್ನ ವಿಚಾರಗಳು, ನನ್ನ ಕನಸುಗಳು, ನನ್ನ ವಿಚಾರಗಳು, ನನ್ನ ಪ್ರಾರ್ಥನೆಗಳು ಜೀವಕಳೆ ತುಂಬಿ ನನ್ನ ಸುತ್ತ ಮುತ್ತ ಹರಿದಾಡಿದಂತೆನಿಸಿತು. ಆ ಪ್ರತಿಯೊಂದು ವಿಚಾರ, ಆ ಪ್ರತಿಯೊಂದು ಭಾವನೆ ಅವರದಾಗಿತ್ತು—ಅದೆ ಪ್ರೇಮವೆಂಬು ದೆಂದು ನನಗೆ ಗೊತ್ತಿರಲಿಲ್ಲ—ಎಲ್ಲವೂ ಹಾಗೇ ಸಾಗುವುದೆಂದೂ ಆ ಭಾವ ನೆಗೆ ಮೊದಲಿಲ್ಲ ಕೊನೆಯಿಲ್ಲವೆಂದೂ ನಾನು ತಿಳಿದುಕೊಂಡದ್ದು.

## ಪರಿಚ್ಛೇದ ೩

ಒಂದು ದಿನ, ಕಾಳುಕಡಿ ಮನೆಗೆ ತರುವಾಗ, ನಾನು ಕಾಟ್ಯಾ ಮುತ್ತು ಸೋನ್ಯಳ ಜೊತೆಗೆ ನಮ್ಮ ತೋಟದಲ್ಲಿ ಕೊಳ್ಳದದಂಡೆಗಿದ್ದ ಲಿಂಬಿಯಗಿಡದ ನೆಳಲಿನಲ್ಲಿಯ ನಮ್ಮ ಪ್ರೀತಿಯ ಸ್ಥಳಕ್ಕೆ ಹೋದೆ—ಅದರಾಚೆಯ ನಮ್ಮ ಹೊಲಗಳೂ ಅಡವಿ ಇದ್ದುವು. ಸರ್ಜಿ ಮಿಕ್ಹಾಲಿಕ್ಸರು ನಮ್ಮನ್ನು ಕಾಣುವು ದಕ್ಕೆ ಬಂದು ಮೂರು ದಿನಗಳಾಗಿದ್ದುವು. ನಾವವರನ್ನು ನಿರೀಕ್ಷಿಸುತ್ತಿದ್ದೆವು—ವಿಶೇಷವಾಗಿ ಬೆಳೆದು ನಿಂತ ನಮ್ಮ ಹೊಲವೊಂದನ್ನು ನೋಡಲಿಕ್ಕೆ ಬರತಕ್ಕವ ರಿದ್ದರೆಂದು ನಮ್ಮ ಗುಮಾಸ್ತ ಹೇಳಿದ್ದರಿಂದ. ಎರಡು ಘಂಟೆಗೆ ರಾಗಿಯ ಹಾಳಿಗೆ ಹೋಗುವ ದಾರಿಗೆ ಕುದುರೆಯ ಮೇಲೆ ಅವರನ್ನು ನೋಡಿದೆವು. ಕಾಟ್ಯಾ ನನ್ನೆಡೆಗೆ ನೋಡಿ ನಸು ನಕ್ಕು ಪೀಚ ಮತ್ತು ಚೆರಿ ಹಣ್ಣುಗಳನ್ನು ತರ ಹೇಳಿದಳು—ಅವರಿಗೆ ಸೇರಿಕೆ ಅವುಗಳಲ್ಲಿ—ಆ ಮೇಲೆ ಆಕೆ ತಾನು ಬೆಂಚಿನಮೇಲೆ ಒರಗಿ ತೂಕಡಿಸತೊಡಗಿದಳು ನಾನು ಡೊಂಕಾದ ಲಿಂಬಿಯ ಟೊಂಗಿಯೊಂದನ್ನು ಮುರಿದೆ—ನನ್ನ ಕೈ ಎಲೆ ತೊಗಟೆಗಳಿಂದ ಸೋರಿಕ್ಕುವ ರಸದಿಂದ ತೊಯ್ದು ಹೋಯಿತು. ನಾನದರಿಂದ ಕಾಟ್ಯಳಿಗೆ ಗಾಳಿ ಬೀಸುತ್ತ ನನ್ನ ಪುಸ್ತಕವನ್ನೋದ ತೊಡಗಿದೆ—ಆಗಾಗ ಅವರು ಬರುವ ದಾರಿಯಕಡೆಗೆ ನೋಡುವುದಕ್ಕಾಗಿ ತಡೆಯುತ್ತಿದ್ದೆ. ಒಂದು ಬರಲ ಲಿಂಬಿಯ ಗಿಡದ ಬಡ್ಡಿಗೆ

ಸೋನ್ಯಾ ದೊಂಬಿಯ ಮನೆ ಕಟ್ಟತೊಡಗಿದ್ದಳು. ಗಾಳಿಯಿರಲಿಲ್ಲ-ಸೆಕೆ ಕುದಿಸುತ್ತಿತ್ತು. ಮೋಡಗಳು ದಟ್ಟಾಗಿ ಕರಿಯಾಗತೊಡಗಿದ್ದುವು. ಇದಿ ಮುಂಜಾವಿನಿಂದ ಗುಡುಗು ಮಿಂಚು ಮುಸುಕುತ್ತ ನಡಿದಿತ್ತು—ಗುಡುಗುವ ಮೊದಲು ನನ್ನ ಮನಸು ಚಂಚಲವಾಗುತ್ತಿತ್ತು—ಹಾಗೇ ಆಯಿತು. ಮಧ್ಯಾಹ್ನವಾದಂತೆ ಮೋಡಗಳು ಹರವಾಗುತ್ತ ನಡೆದುವು—ಸೂರ್ಯನು ಬಯಲ ಮುಗಿಲಲ್ಲಿ ಸಾಗಿದ್ದನು—ಎಲ್ಲಿಯೊ ಮೂಲೆಯಲ್ಲಿ ಅಸ್ಪಷ್ಟವಾಗಿ ಗುಡುಗುತ್ತಿತ್ತು. ಒಂದೆ ಒಂದು ಕಾರ್ಮೋಡವು ನೆಲದಂಚಿನಾಚೆಯಿಂದ ಹುಡಿ ಮುಸಕಿಕೊಂಡು ಅಣಕಿಸುತ್ತಿತ್ತು—ನೆಲದೆಡೆಗೆ ಡೊಂಕಾಗಿ ತೀಡುತ್ತಿದ್ದ ಮಿಂಚಿನ ಬಳ್ಳಿಯೊಂದು ಅದನ್ನು ಕತ್ತರಿಸುತ್ತಿತು. ನಮ್ಮ ಪಾಲಿಗಂತೂ ಆ ದಿನ ಬಿರುಗಾಳಿ ಬಯಲಾದೀತೆಂಬುದು ನಿಚ್ಚಳವಿತ್ತು. ನಮ್ಮ ತೋಟದಾಚೆಯಿದ್ದ ದಾರಿ ಅಲ್ಲಲ್ಲಿ ಕಾಣುತ್ತಿತ್ತು—ಬಾಟೆಯ ಭಾರದಿಂದ ನರಗುಡುವ ಗಾಡಿಗಳ ಸಾಲುಗಳೆ ಕಾಣುತ್ತಿದ್ದುವು— ಭರದಿಂದ ಸಾಗಿದ ಬರಿಗಾಡಿಗಳು—ಆಳುಮಕ್ಕಳ ಅಲೆದಾಡುವ ತೋಳು ಕಾಲುಗಳಿಗೆ ಕಾಣುತ್ತಿದ್ದುವವುಗಳಲ್ಲಿ!–ಖಡಖಡ ಸಪ್ಪಳ ಮಾಡುತ್ತ ಬಂದು ಕೂಡುತ್ತಿದ್ದುವು. ಮೇಲಕ್ಕೂ ಏಳದ ಕೆಳಗೂ ಇಳಿಯದ ದಟ್ಟ ಹುಡಿ ಬೇಲಿಯ ಆಚೆ ಗಿಡಗಳ ಸಂದಿನಲ್ಲಿ ನಿಶ್ಚಲವಾಗಿ ಕಾಣುತ್ತಿತ್ತು; ಲಂಬವರ್ತುಲಾಕಾರ ಬಣಿವೆಗಳು ಒಂದಕ್ಕಿಂತ ಒಂದು ಎತ್ತರತ್ತರವಾಗಿ ಸಾಲಾಗಿ ಕಾಣುತ್ತಿದ್ದುವು. ಎದುರಿದ್ದ ಹುಡಿ ತುಂಬಿದ ಹೊಲದಲ್ಲಿ ಮತ್ತೆ ಕೆಲವು ಗಾಡಿ ಓಡಾಡುವುದೂ ಬಾಟೆಯ ಕಟ್ಟುಗಳೂ ಕಾಣುತ್ತಿದ್ದುವು. ದೂರದಿಂದ ಕೆಲ ಗಾಡಿಗಳ ಸಪ್ಪಳದೊಂದಿಗೆ ಮಾತಾಡುವುದೂ ಹಾಡುವುದೂ ಕೇಳಬರುತಲಿದ್ದವು. ಒಂದೆಡೆ ಕೋಲಿಗಳು, ನಡು ನಡುವೆ ತೌಡು ತುಂಬಿದ ಹುಲ್ಲು, ಕಾಣುತ್ತಿದ್ದುವು. ಕೆಳಗೆ ಬಲ ಬದಿಯಲ್ಲಿ ಹುಲ್ಲು ಬಾಟೆಗಳನ್ನು ಕಟ್ಟುತ್ತಿರುವ ಹೆಂಗಸರ ತರತರದ ಬಟ್ಟೆಗಳು ಕಣ್ಣಿಗೆ ಬೀಳುತ್ತಿದ್ದುವು. ಇಲ್ಲಿ ಕೋಲಿಗಳ ರಂದೆಯೆ ಇಡುಗಿತ್ತು. ಆ ಹೆಂಗಸರು ಕಟ್ಟುಗಳನ್ನು ಕಟ್ಟಿ ಕಟ್ಟಿದಂತೆ ರಂದೆ ಕರಗತೊಡಗಿತು. ಆ ಬೇಸಗೆ ನಾನು ನೋಡನೋಡುತ್ತಲೆ ಶರತ್ಕಾಲವಾದಂತೆನಿಸಿ ನನಗೆ. ನಮ್ಮ ಆ ನೆಳಲಿನ ಆಸರವನ್ನು ಬಿಟ್ಟರೆ ಎಲ್ಲೆಲ್ಲಿಯೂ ಹುಡಿ, ಬಿಸಿಲು—ಆ ಬಿಸಿಲಲ್ಲಿ ಕೂಲಿಯ ಆಳುಗಳು ಮಾತಾಡುತ್ತ ಸಪ್ಪಳ ಮಾಡುತ್ತ ಕೆಲಸ ನಡೆಸಿದ್ದರು.

ಇತ್ತ ಕಾಟ್ಯಾ ತನುವಿನಲ್ಲಿದ್ದ ಆ ಬೆಂಚಿನ ಮೇಲೆ ಸಂಪಾಗಿ ಮಲಗಿಕೊಂಡಿದ್ದಳು—ಆಕೆಯ ರೇಷ್ಮೆಯ ಕರ ವಸ್ತ್ರದಕೆಳಗೆ ರಸ ಗುಡುತ್ತಿರುವ ಕರಿ 'ಚೆರಿ' ಹಣ್ಣುಗಳು ತಟ್ಟೆಯಲ್ಲಿ ಬಾಯಿಗೆ ನೀರು ಬಿಡುವಂತೆ ಮಿನುಗುತ್ತಿದ್ದುವು—ನಮ್ಮ ಉಡುಪುಗಳು ಸ್ವಚ್ಛ ನಿಚ್ಚಳವಾಗಿದ್ದುವು. ಹರಿವಾಣದಲ್ಲಿಯ ನೀರು ಕಾಮನ ಬಿಲ್ಲಿನ ಬಣ್ಣಗಳಿಂದ ಥಳಥಳಿಸುತ್ತಿತ್ತು—ನಾನೆಷ್ಟು ಸುಖಿಯಾಗಿದ್ದೆ—"ಸುಖಿಯಾಗದೆ ಮತ್ತೇನುಮಾಡಲಿ?" ನಾನು ಚಿಂತಿಸಿದೆ; "ಸುಖಿಯಾಗುವುದು ತಪ್ಪೆ? ಯಾವ ಬಗೆಯಿಂದ ಯಾರಿಗೆಂತು ನನ್ನನ್ನು ಒಪ್ಪಿಸಲಿ?"

ಅಷ್ಟರಲ್ಲಿ ಸೂರ್ಯನು ಬರ್ಚಗಿಡಗಳ ಸಾಲುಗಳಲ್ಲಿ ಮರೆಯಾಗಿದ್ದನು—ಹೊಲಗಳಲ್ಲಿಯ ಹುಡಿ ಕೂಡಬೀಳತೊಡಗಿತ್ತು—ಆ ಇಳಿ ಬೆಳಕಿನಲ್ಲಿ ದೂರದವರೆಗೆ ಹರವಾಗಿತ್ತು. ಮೋಡಗಳು ಇಲ್ಲದಂತೆಯೆ ಆಗಿದ್ದುವು. ಗಿಡಗಳ ಸಂದಿನಿಂದ ಚಪ್ಪರ ಮುಚ್ಚಿದ ಮೂರು ಹೊಸ ಬಣಿವೆಗಳು ಕಾಣ್ಣುತ್ತಿದ್ದುವು. ಕೂಲಿಯ ಆಳು ಬಣಿವೆಗಳನ್ನಿಳಿದು ಬಂದರು. ಗಾಡಿಗಳು, ಅದು ಕೊನೆಯ ಸಲವೆ ಇದ್ದೀತು, ಕೂಗಿನೊಂದಿಗೆ ಒತ್ತರ ಮಾಡಿದುವು. ಹೆಂಗಸರು ಹೆಗಲಮೇಲೆ ಸಿಪ್ಪಾಡಿ ಹೊತ್ತುಕೊಂಡು ಟೊಂಕಕ್ಕೆ ಮದಿಯನು ಸುತ್ತಿಕೊಂಡು ಹಾಡುತ್ತ ಹಾಡುತ್ತ ನಮ್ಮೆದುರಿನಿಂದ ಮನೆಯ ದಾರಿ ಹಿಡಿದಿದ್ದರು—ಇನ್ನೂ ಸರ್ಜಿ ಮಿಕ್ಯಾಲಿಕ್ಷರು ಬರುವ ಲಕ್ಷಣ ತೋರಲಿಲ್ಲ-ಅವರು ಕುದುರೆಯನ್ನೇರಿ ಮರಡಿಯನ್ನಿಳಿದು ಬರುವುದನ್ನು ನಾನು ನೋಡಿ ಎಷ್ಟೊ ಹೊತ್ತು ಆಗಿತ್ತು. ಒಮ್ಮಿಂದೊಮ್ಮೆಲೆ ಅವರು ನಮ್ಮ ಗಿಡಗಳ ದಾರಿಗೆ ಕಂಡರು—ಆ ದಿಕ್ಕಿಗವರು ಬರುವರೆಂದು ನಾನೆಣಿಸಿರಲಿಲ್ಲ. ಅವರು ಕೊಳ್ಳ ಸುತ್ತುಹಾಕಿ ಬಂದಿದ್ದರು. ಅವರು ನನ್ನೆಡೆಗೇ ಬಂದರು—ಟೊಪ್ಪಿಗೆ ತೆಗೆದಿದ್ದರು, ಕುಲು ಕುಲು ನಗುತ್ತಿದ್ದರು. ಕಾಟ್ಯಾ ಮಲಗಿದ್ದನ್ನು ನೋಡಿ ತುಟಿ ಕಚ್ಚಿ ಕಣ್ಣು ಮುಚ್ಚಿ, ತುದಿಗಾಲಿನಿಂದ ನಡೆಯುತ್ತ ಬಂದರು. ತತ್‍ಕ್ಷಣ ನಾನು ತಿಳಿದುಕೊಂಡೆ ಅವರಾಗ ಒಂದು ಬಗೆಯ ಅಕಾರಣ ಆನಂದವೃತ್ತಿಯಲ್ಲಿದ್ದರು-ಅವರೆಂಬುದನ್ನು ಆ ವೃತ್ತಿಯಲ್ಲಿದ್ದರೆ ನನಗೆ ಬಲು ಹಿಗ್ಗು-ಅದನ್ನೆ ನಾವು "ತಡೆಯಿಲ್ಲದ ಹಿಗ್ಗು" ಎಂದು ಕರೆಯುತ್ತಿದ್ದೆವು-ಓದು ತಪ್ಪಿಸಿ ಬಿಟ್ಟ ಬಂದ

ಶಾಲೆಯ ಹುಡುಗನಂತೆ ಅವರು ಕಂಡರು. ಅವರಲ್ಲಿ ಎಲ್ಲೆಲ್ಲಿಯೂ ಸಮಾಧಾನ ಆನಂದ ಹುಡುಗಾಟ ಕಂಡು ಬರುತ್ತಿದ್ದುವು.

"ಎಳೆ ವಾಯುಲತೆ, ಹೇಗಿರುವಿರಿ? ಎಲ್ಲವೂ ಕ್ಷೇಮವೆ?" ಅವರು ನನ್ನೆಡೆಗೆ ಬಂದು ನನ್ನ ಪ್ರಶ್ನೆಗೆ ಉತ್ತರವಾಗಿ, "ನಾನೆ! ಒಳ್ಳೆ ಹೋಕಾಗಿದ್ದೇನೆ. ಹದಿಮೂರು ವಯಸಿನ ಹುಡುಗನಂತೆ ಕುದುರೆಯ ಆಟವನ್ನಾಡಲೊ ಗಿಡವನ್ನೇರಲೊ ಎಂದೆನಿಸಿಸುವುದು." ಎಂದು ಹೇಳಿದರು.

"ತಡೆಯಿಲ್ಲದ ಹಿಗ್ಗೊ?" ಅವರ ಹಿಗ್ಗಿದ ಕಣ್ಣಲ್ಲಿ ಕಣ್ಣಿಟ್ಟು ನೋಡಿ ನಾನು ಕೇಳಿದೆ—ಅವರ ಆ "ಹಿಗ್ಗಿ"ನ ಸುಂಕ ನನಗೂ ಅಂಟುಕೊಂಡಿತ್ತೆಂಪೆನಿಸಿತು.

"ಅಹುದು." ಅವರೆಂದರು. ಆ ಮೇಲೆ ಕಣ್ಣು ಚಿವುಟಿ ನಗೆ ಬಿಗಿಹಿಡಿದು ಕೇಳಿದರು; "ಆದರೆ ಕಾಟ್ಯಳ ಮೂಗಿನ ಅವಸ್ಥೆ ಮಾಡುವ ಕಾರಣ ತಿಳಿಯದು ನನಗೆ."

ಅವರೆಡೆಗೆ ಕಣ್ಣಿಟ್ಟು ನಾನು ಆ ಟೊಂಗಿಯನ್ನು ಬಿಸುತ್ತ ಕಾಟ್ಯಳ ಮೋರೆಯ ಮೇಲೆ ಹೊದಿಸಿದ ಕರವಸ್ತ್ರವನ್ನು ಸರಿಸಿ ಬಿಟ್ಟೆದ್ದೆ—ಆಗ ಎಲೆಗಳಿಂದ ಆಕೆಯ ಮೋರೆಗೇ ಏಟು ಕೊಡತೊಡಗಿದ್ದೆ—ನಾನು ನಕ್ಕು ಬಿಟ್ಟೆ.

"ತನಗೆ ಎಚ್ಚರವೆ ಇತ್ತೆಂದು ಆಕೆಯುಂತೂ ಹೇಳಿಯೆ ಹೇಳುವಳು." ಆಕೆಯನ್ನು ಎಚ್ಚರಗೊಳಿಸಬಾರನೆಂದೊ ಏನೊ ನಾನು ದನಿ ತಗ್ಗಿಸಿ ಮಾತನಾಡಿದೆ. ಆದರೆ ನಿಜವಾಗಿ ಹಾಗೆ ನನ್ನ ಉದ್ದೇಶವಿರಲಿಲ್ಲ—ಅವರ ಕೂಡ ದನಿ ತಗ್ಗಿಸಿ ಮಾತನಾಡುವುದು ಮೋಜೆನಿಸಿತು ನನಗೆ.

ನನ್ನ ದನಿ ಕೇಳಬಾರದಷ್ಟು ತಗ್ಗಿತ್ತೆಂದು ನೆವ ಮಾಡಿ ನನ್ನನ್ನಣಕಿಸಿ ತುಟಿ ಅಲ್ಲಾಡಿಸಿದರು. ತಟ್ಟೆಯಲ್ಲಿಯ ಚೆರಿ ಹಣ್ಣುಗಳನ್ನು ನೋಡಿ ಕದ್ದೊಯ್ಯುವ ನಾಟಕ ಮಾಡಿ ಆ ತಟ್ಟೆಯನ್ನು ಸೋನ್ಯಳಕಡೆಗೆ ಲಿಂಬಿಯುಗಿಡ ಕೊಯ್ದರು—ಆಕೆಯ ದೊಂಬೆಯ ಮೇಲೆ ಕುಳಿತುಬಿಟ್ಟರು. ಆಕೆ ಸಿಟ್ಟಿಗೆದ್ದಳು—ಆ ಮೇಲೆ ಯಾರು ಹೆಚ್ಚು ಹಣ್ಣುಗಳನ್ನು ತಿಂದು ಮುಗಿಸುವರೊ ಎಂದು ಹೊಸ ಆಟವನ್ನು ತೆಗೆದು ಆಕೆಯ ಸಮಾದಾನ ಮಾಡಿದರು.

"ಬೇಕಾದರೆ ಇನ್ನೂ ಹಣ್ಣುಗಳನ್ನು ತರಿಸುತ್ತೇನೆ" ನಾನೆಂದೆ; "ಇಲ್ಲವೆ ನಾವೆ ಹೋಗೋಣ ತರಲಿಕ್ಕೆ."

ಅವರು ತಟ್ಟೆಯನ್ನು ತೆಗೆದುಕೊಂಡರು—ದೊಂಬೆಗಳನ್ನು ಅದರಲ್ಲಿಯೆ ಇಟ್ಟರು—ನಾವು ಮೂವರೂ ಬನದೆಡೆಗೆ ನಡೆದೆವು. ಸೋನ್ಯಾ ನಮ್ಮ ಹಿಂದಿನಿಂದ ನಗುತ್ತ ದೊಂಬೆಗಳನ್ನು ಕೊಡಬೇಕೆಂದು ಅವರನ್ನು ಅಂಗಿ ಹಿಡಿದೆಳೆಯುತ್ತ ನಡೆದಿದ್ದಳು. ಅವುಗಳನ್ನಾಕೆಗೆ ಕೊಟ್ಟು ನನ್ನೆಡೆಗೆ ನೋಡಿ ಒಳ್ಳೆಯ ಗಾಂಭೀರ್ಯದಿಂದ ಮಾತನಾಡತೊಡಗಿದರು.

"ನೀವು ವಾಯುಲತೆಯಾದದ್ದೆ ನಿಜ," ಅವರೆಂದರು—ಯಾರನ್ನೂ ಎಚ್ಚರಿಸುವ ಭಯವಿಲ್ಲದಾಗಿಯೂ ದನಿ ತಗ್ಗಿತು. "ನಾನು ಆ ಸೆಕೆ ಹುಡಿ ತುಳಿಯುತ್ತ ದಣಿದು ಬಂದ ತತ್‌ಕ್ಷಣ ವಾಯುಲತೆಯ ಸುವಾಸನೆ ಕಂಡೆ—ವಸಂತಕಾಲದ ಮಂಜು ಹುಲ್ಲುಗಳಿಂದಡಗಿದ ಎಳೆ ವಾಯುಲತೆಯಲ್ಲ—"

"ಸುಗ್ಗಿ ಚನ್ನಾಗಿದೆಯೆ?" ಎಂದು ನಾನು ಆ ಮಾತಿನಿಂದಾದ ಹಿಗ್ಗಿನ ಕಲಿವಿಲಿಯನ್ನು ಮರೆ ಮಾಡಿದೆ.

"ಭರದಲ್ಲಿದೆ! ನಮ್ಮ ಆಳುಗಳೆ ಅಷ್ಟು ಪಳಗಿದವರು—ಅವರನ್ನು ಹೆಚ್ಚೆಚ್ಚಾಗಿ ತಿಳಿದುಕೊಂಡಂತೆ ಅವರ ಬಗೆಗೆ ಪ್ರೀತಿ ಹುಟ್ಟಬಹುದು."

"ಅಹುದು," ನಾನೆಂದೆ; "ನೀವು ಬರುವ ಮೊದಲು ನಾನು ತೋಟದೀಚೆಯಿಂದವರನ್ನು ನೋಡುತ್ತಿದ್ದೆ—ಇ ಮೇಲೊವ್ಮೆಲೆ ನಾನು ಲೋಲಾಡಬೇಕು, ಅವರು ದುಡಿದು ದುಡಿದು ಸಾಯಬೇಕು ಎಂಬುದರ ನಾಚಿಕೆಯಾಯಿತು—ನಂತರ........"

ಅವರು ನನ್ನನ್ನು ತಡೆದು ನಿಲ್ಲಿಸಿ ಮಮತೆಯಿಂದಾದರೂ ಗಾಂಭೀರ್ಯದಿಂದ ನುಡಿದರು; "ಹಾಗೆ ಮಾತನಾಡಬೇಡಿರಿ, ಕಂಡಿರಾ! ಅದೊಂದು ಪವಿತ್ರ ವಿಷಯ—ಏನೊ ಮಾತನಾಡಿ ಹೋಗುವಂತಿಲ್ಲ. ದೇವರು ದಯೆ ಪಾಲಿಸಲಿ—ನೀವು ಸವಿಸವಿ ಮಾತನಾಡದಾಗಿರಿ ಅವರ ಬಗೆಗೆ—"

"ನಿಮ್ಮೆದುರಿಗಷ್ಟೆ ನಾನು ಹೀಗೆ ಮಾತನಾಡುವುದು."

"ಅದು ಸರಿ—ನಾನೊಪ್ಪಿದೆ. ಚೆರಿ ಹಣ್ಣುಗಳದೇನು ವಿಷಯ?"

ಬನಕ್ಕೆ ಬೀಗವಿತ್ತು—ತೋಟಿಗನೆಲ್ಲಿಯೂ ಕಾಣುತ್ತಿರಲಿಲ್ಲ. ಸುಗ್ಗಿಗೆ ಕೈಕೊಡಲಿಕ್ಕೆ ತಾವೆ ಎಲ್ಲರನ್ನು ಅಟ್ಟಿದ್ದರು. ಸೋನ್ಯಾ ಬೀಗಕ್ಕಾಗಿ ಓಡಿದಳು.

ಆಕೆ ಬರುವವರೆಗೆ ಇವರಿಗೆಲ್ಲ ತಡೆ—ಗೋಡೆಯ ಮೂಲೆಯನ್ನೇರಿ ಜಾಳಿಗೆಯನ್ನು ಸರಿಸಿ ಆಚೆಗೆ ಕೆಳಗೆ ಹಾರಿಕೊಂಡು ಬಿಟ್ಟರು.

ಅವರ ದನಿ ಗೋಡೆಯ ಮೇಲೆ ಕೇಳ ಬಂದಿತು–"ನಿಮಗೂ ಬೇಕಿದ್ದರೆ ತಟ್ಟೆಯನ್ನು ಕೊಡಿರಿ."

"ಬೇಡ," ನಾನೆಂದೆ; "ನಾನೆ ಆರಿಸಬೇಕಾಗಿದೆ. ಬೀಗವನ್ನು ನಾನೆ ತರುತ್ತೇನೆ; ಸೋನ್ಯಳಿಗೆ ಸಿಗಲಿಕ್ಕಿಲ್ಲ."

ಆ ಮೇಲವರು ಅಲ್ಲಿ ಹೇಗೆ ವರ್ತಿಸುವರು ಹೇಗೆ ಕಾಣುವರು ಎಂಬುದನ್ನು ನೋಡಬೇಕೆಂಬ ಲವಲವಿಕೆ ಹುಟ್ಟಿತು ನನ್ನಲ್ಲಿ—ಯಾರೂ ನೋಡುವುದಿಲ್ಲವೆಂದು ತಿಳಿದಾಗಿನ ಅವರ ನಡೆನುಡಿಯನ್ನು ನೋಡಲೆ ಬೇಕೆಂಬ ಹವಣಿಕೆಯದು. ಆಗ ನಾನವರನ್ನು ಒಂದು ಕ್ಷಣಕೂಡ ಮರೆಯಾಗಗೊಡದಾಗಿದ್ದೆ—ಮುಳ್ಳಕಂಟಿಯಲ್ಲಿ ತುದಿಗಾಲಿನಿಂದ ಓಡಿಹೋಗಿ ಆ ಬನದ ಆಚೆಯ ಬದಿಗೆ ಹೋದೆ--ಅಲ್ಲಿಯ ಗೋಡೆ ತುಸು ಕಿರಿದಾಗಿತ್ತು-ಒಂದು ಸಿಪಾಯಿಯ ಮೇಲೆ ಹತ್ತಿ ನಿಂತಾಗ ಗೋಡೆ ನನ್ನ ಸೊಂಟಕ್ಕೆ ಬರುತ್ತಿತ್ತು—ನಾನು ಒಳಗೆ ಬನದಲ್ಲಿ ಇಣಿಕಿ ನೋಡಿದೆ—ಹರ ಹರಕಾದ ಆ ದೊಡ್ಡ ದೊಡ್ಡ ಎಲೆಗಳುಳ್ಳ ಒರಟು ಉರುಟಾದ ಹಳೆಯ ಗಿಡಗಳೂ ಮಿಡಿ ಎಲೆಗಳಲ್ಲಿ ಇಳಿಬಿದ್ದ 'ಚೆರಿ' ಹಣ್ಣುಗಳ ಗೊಂಚಲುಗಳೂ—ನಾನು ಜಾಳಿಗೆಯನ್ನು ಸರಿಸಿ ನನ್ನ ತಲೆಯನ್ನು ಒಳನೂಕಿದೆ—ಒಂದು ಹಳೆಯ ಚೆರಿ ಗಿಡದ ತೊಡಕು ತೊಡಕಾದ ಟೊಂಗಿಯೊಂದರ ಕೆಳದಿಂದ ನಾನು ಸರ್ಜಿ ಮಿಕಾಲಿಚರನ್ನು ನೋಡಿದೆ. ನಾನು ಹೋಗಿರಬೇಕು ಮತ್ತು ತಮ್ಮನ್ನು ಯಾರೂ ನೋಡುತ್ತಿರಲಿಕ್ಕಿಲ್ಲ ಎಂದವರು ತಿಳಿಕೊಂಡದ್ದು ಸ್ಪಷ್ಟವಿತ್ತು. ಟೊಪ್ಪಿಗೆ ತೆಗೆದು ಕಣ್ಣು ಮುಚ್ಚಿ ಅವರೊಂದು ಹಳೆಯ ಚೆರಿ ಗಿಡದ ಟೊಂಗಿಗಳ ಕತ್ತರಿಯಲ್ಲಿ ಕುಳಿತಿದ್ದರು—ಗಿಡದಿಂದ ಹೊರಡುವ ಅಂಟನ್ನು ಗುಳಿಗೆ ಗುಳಿಗೆಯಾಗಿ ಮೆದ್ದುತ್ತಿದ್ದರು. ಆ ಮೇಲೊಮ್ಮೆಲೆ ಕಣ್ಣು ತೆರೆದು, ಭುಜ ಹಾರಿಸಿ ಏನೇನೊ ಪುಟಪುಟಿಸಿದರು, ನಕ್ಕರು. ಅವರ ಆ ಶಬ್ದ, ಆ ನಗೆ ಅವರಿಗೆ ಸರಿಯಾಗಿರಲಿಲ್ಲ—ಕದ್ದು ನೋಡಿದ್ದಕ್ಕಾಗಿ ನನಗೆ ನಾಚಿಕೆಯಾಯಿತು. ಅವರು ನುಡಿದದ್ದು "ಮಾಷಾ!" ಎಂದಿರಬೇಕೆಂದು ನನಗೆನಿಸಿತು. "ಅಶಕ್ಯ,"

ಎಂದೆಂದುಕೊಂಡೆ " ಮುದ್ದು ಮಾಷಾ!" ಅವರು ಮತ್ತೆ ದನಿ ತಗ್ಗಿಸಿ ಬಲು ಪ್ರೀತಿಯಿಂದ ನುಡಿದರು. ಆ ಎರಡು ಶಬ್ದಗಳ ಬಗೆಗೆ ಈಗ ಸಂಶಯವೆ ಉಳಿದಿರಲಿಲ್ಲ. ನನ್ನ ಎದೆ ಹಿರಿಯಾಗಿ ಹಾರಲಾರಂಭಿಸಿತು—ಅದೆಂಥದೊ ಹವಣಿಕೆಯ ಆನಂದ—ಆಗಬಾರದಾದ ಆನಂದವೆಂದೆನಿಸಿತು ನನಗೆ—ನನ್ನ ನ್ನಾವರಿಸಿತು—ನಾನು ಎಲ್ಲಿ ಕೆಳಗೆ ಬಿದ್ದು ಗುಟ್ಟು ರಟ್ಟು ಮಾಡುವೆನೊ ಎಂದು ಗೋಡೆಯನ್ನು ಗಟ್ಟಿಯಾಗಿ ಅವಚಿಕೊಂಡೆ. ನನ್ನ ಸರಿದಾಟದಿಂದಾದ ಸಪ್ಪಳದಿಂದ ಅವರು ಬೆಚ್ಚಿ ಸುತ್ತಲೂ ನೋಡಿದರು—ಕಣ್ಣು ತಗ್ಗಿಸಿದರು, ಮೋರೆ ಮಗುವಿನ ಮೋರೆಯಂತೆ ಕೆಂದೇರಿತು. ಅವರು ಮಾತನಾಡ ಬಯಸಿ ದರು, ಆದರೆ ವ್ಯರ್ಥ; ಅವರ ಮೋರೆ ಮತ್ತೆ ಮತ್ತೆ ಕೆಂದಾಯಿತು ಅವರಿನ್ನೂ ನನ್ನೆಡೆಗೆ ನೋಡಿ ನಗುತ್ತಿದ್ದರು. ನಾನೂ ನಕ್ಕೆ. ಅವರ ಮೋರೆ ಸುಖ ವಿಚಾರದಿಂದ ಹಿಗ್ಗಿತ್ತು. ನನ್ನನ್ನು ಬೈಯುವ, ಕೌತುಕ ಪಡುವ ಕಕ್ಕನಾಗಿರ ಲಿಲ್ಲ ಆಗ ಅವರು; ನನ್ನ ಮೆಟ್ಟಿಗೆ ಬಂದ ನಾನವರನ್ನು ಪ್ರೀತಿಸಿದಂತೆ ನಾನ ವರಿಗೆ ಅಂಜಿದಂತೆ ನನ್ನನ್ನು ಪ್ರೀತಿಸುವ ನನಗಂಜುವ ಒಬ್ಬ ಗಂಡಸಾಗಿ ದ್ದರು. ನಾವು ಮಾತನಾಡದೆ ಒಬ್ಬರನ್ನೊಬ್ಬರು ನೋಡಿದೆವು. ಆ ಮೇಲೊ ಮ್ಮೆಲೆ ಅವರು ಹುಬ್ಬಿಗೆ ಗಂಟಿಕ್ಕಿದರು. ಅವರ ನಗು, ಅವರ ಕಣ್ಣಲ್ಲಿಯ ಹೊಳಪು ಮಾಯವಾಯಿತು. ಅವರು ತಮ್ಮ ಮೊದಲಿನ ಹಿರಿನತದ ವಿರಕ್ತ ಭಾವ ತಾಳಿದರು—ನಾವೇನೊ ಅಲ್ಲದ್ದನ್ನು ಮಾಡತೊಡಗಿದ್ದೆವು; ಅವರಿಗೆ ಪಶ್ಚಾತ್ತಾಪವೆನಿಸಿ ನನಗೂ ಪಶ್ಚಾತ್ತಾಪ ಪಡ ಹೇಳಿದಂತೆ.

"ಕೆಳಗಿಳಿಯ ಬಾರದೆ! ಬಿದ್ದು ಕೈಕಾಲು ಮುರಿದು ಕೊಳ್ಳುವಿರಿ ಅವರೆಂದರು; ಕೂದಲು ಸರಿಯಾಗಿ ಕಟ್ಟಿ ಕೊಳ್ಳಿರಿ. ಅವತಾರವೇನು ಕಾಣುತ್ತಿದೆ ನೋಡಿರಿ."

"ಇವರಿಗೆ ಅಲ್ಲದ ಸೋಗೇಕೆ?" ರೊಚ್ಚಿಗೆದ್ದು ನಾನೆಂದುಕೊಂಡೆ. ಅದೆ ಕಾಲಕ್ಕೆ ಅವರ ನಿಗ್ರಹವನ್ನು ಕೆಣಕಿ ನನ್ನ ಪ್ರಭಾವವನ್ನು ಪರಿಕಿಸಿ ನೋಡಬೇಕೆಂಬ ದುರಿಚ್ಛೆ ಹುಟ್ಟಿತು ನನ್ನಲ್ಲಿ.

"ಬೇಡ," ನಾನೆಂದೆ; "ನಾನೆ ಆರಿಸಿಕೊಳ್ಳಬೇಕೆಂದು ಮಾಡಿರು ವೆನು." ಹತ್ತರದ ಟೊಂಗಿಯೊಂದನ್ನು ಹಿಡಿದು ಗೋಡೆಯನ್ನೇರಿದೆ; ಅವರು ನನ್ನನ್ನು ಮುಟ್ಟುವ ಮೊದಲೆ ಆಚೆಗೆ ಹಾರಿಕೊಂಡೆ.

"ಎಷ್ಟು ತಿಳಿಗೇಡಿತನ ಮಾಡುವಿರಿ!" ಅವರು ಪಟ ಗುಟ್ಟರು–ಮತ್ತೆ ಮೋರೆ ಕೆಂಪೇರಿತು, ತಮ್ಮ ಮನಸಿನ ಚಲ ವಿಚಲವನ್ನು ತ್ರಾಸಿಗೆದ್ದ ನೆವ ಮಾಡಿ ಬಚ್ಚಿಟ್ಟರು. "ಎಲ್ಲಿಯಾದರೂ ಪೆಟ್ಟು ತಾಗಿಸಿಕೊಳ್ಳಬಹುದು ನೀವು. ಇನ್ನು ಇಲ್ಲಿಂದ ಹೊರಬೀಳುವಿರಿ ಹೇಗೆ?"

ಅವರು ಮೊದಲಿಗಿಂತ ಹೆಚ್ಚು ಗೊಂದಲದಲ್ಲಿ ಬಿದ್ದರು. ಅವರ ಈ ಗೊಂದಲದಿಂದ ನನಗೆ ಮೋಜೆನಿಸದೆ ಭೀತಿಯೆ ಆಯಿತು. ಅದರ ಸುಂಕ ನನಗೂ ಅಂಟುಗೊಂಡು ನಾಚಿಕೆಯಾಯಿತು. ಅವರ ಕಣ್ಣಿಗೆ ಕಣ್ಣು ಕೊಡದೆ, ಏನೂ ಮಾತನಾಡದೆ ನಾನು ಚೆರಿ ಹಣ್ಣುಗಳನ್ನು ಆರಿಸ ತೊಡಗಿದೆ. ಮಾಡಿದ್ದಕ್ಕೆ ಪಶ್ಚಾತ್ತಾಪ ಪಟ್ಟು ನನ್ನನ್ನೆ ನಾನು ಹಳಿದುಕೊಂಡೆ. ನನ್ನ ತಿಳಿಗೇಡಿತನದಿಂದ ಅವರ ಸದಭಿಪ್ರಾಯವನ್ನು ಅಳಿಸಿರಬೇಕೆಂದೆನಿಸಿತು. ನಾವಿಬ್ಬರೂ ಸುಮ್ಮನಿದ್ದೆವು–ಗೊಂದಲಗೆಟ್ಟಿದ್ದೆವು. ಈ ವಿಪರೀತ ಪರಿಸ್ಥಿತಿಯಿಂದ ಸೋನ್ಯಾ ಬೀಗದಕ್ಕೆ ತಂದು ನಮ್ಮನ್ನು ಬಿಡಿಸಿದಳು ಕೆಲಕಾಲ ನಾವು ಒಬ್ಬರನ್ನೊಬ್ಬರು ಮಾತನಾಡಿಸದೆ ಆಕೆಯನ್ನುದ್ದೇಶಿಸಿಯೆ ಮಾತುಕತೆ ಸಾಗಿಸಿದೆವು ನಾವು ಮರಳಿ ಕಾಟ್ಯಳೆಡೆಗೆ ಬಂದಾಗ ತಾನು ನಿದ್ರೆ ಹೋಗಿದ್ದೆ ಇಲ್ಲವೆಂದೂ ತನಗೆ ಎಲ್ಲವೂ ಕೇಳ ಬರುತ್ತಲಿತ್ತೆಂದೂ ಹೇಳಿದಳು–ನಾನು ಸ್ವಸ್ಥಳಾದೆ. ಅವರು ಹೋಗಲಿಲ್ಲ. ಒಂದು ದಿನ ಎಂದೊ ನಾವು ನಡೆಸಿದ ಚರ್ಚೆ ನನ್ನೆದುರಿಗೆ ನಿಚ್ಚಳವಾಗಿ ನಿಂತಿತು.

ಹೆಂಗಸಿನಗಿಂತ ಗಂಡಸಿಗೆ ಪ್ರೀತಿಯಲ್ಲಿ ಸಿಲುಕಿದಾಗ ಒಡಚಿ ಮಾತನಾಡುವುದು ಸುಲಭವಿದೆ ಎಂದು ಆಕೆಯ ಹೇಳಿಕೆ

"ತಾನು ಪ್ರಿತಿಯುಲ್ಲಿ ಸಿಲುಕಿರುವೆನೆಂದು ಗಂಡಸು ಹೇಳಬಹುದು, ಹೆಂಗಸು ಹೇಳಲಾರಳು," ಆಕೆ ಎಂದಳು.

"ನಾನೊಪ್ಪಲಾರೆ," ಅವರೆಂದರು; "ಹಾಗೆ ಹೇಳುವುದು ಗಂಡಸಿನ ಕೆಲಸವಲ್ಲ. ಆತನೂ ಹೇಳಲಾರ ತಾನು ಪ್ರಿತಿಯುಲ್ಲಿ ಸಿಲುಕಿರುವೆನೆಂದು."

"ಅದೇಕೆ?" ನಾನು ಕೇಳಿದೆ.

" ಏಕೆಂದರೆ ಅದು ನಿಜವಿರಲಾರದು. ಪ್ರೀತಿಯಲ್ಲಿ ಸಿಲುಕಿರುವೆನೆಂಬುದ ದೆಂಥ ಹೇಳಿಕೆ ? ಗಂಡಸಿನ ತಿಳಿವಳಿಕೆಯದು, ತಾನು ಹೇಳಿದ ಮಾತ್ರಕ್ಕೆ ಎಲ್ಲಿಯೊ ಏನೊ ಕುಲುಕಿ ಆಡುವುದು—ಚಮತ್ಕೃತಿ ಒದಗುವುದು—ಶಕುನ ಗಳೊ ಆಶ್ಚರ್ಯಗಳೊ- ಬಂದೂಕು ತುಬಾಕಿಗಳೊ ಹಾರುವವು. 'ನಾನು ನಿನ್ನನ್ನು ಪ್ರೀತಿಸುವೆನೆಂ'ದು ಹೇಳುವವನು ತಾನೆ ಮೋಸಹೋಗುವನು ಇಲ್ಲವೆ ಇತರರನ್ನು ಮೊಸಗೊಳಿಸುವನು. "

"ಗಂಡಸು ಹೆಂಗಸಿಗೆ ನಿನ್ನನ್ನು ಪ್ರೀತಿಸುವೆನೆಂದು ತಾನೆ ಹೇಳದೆ ಇದ್ದರೆ ಆಕೆಗೆ ತಿಳಿಯುವ ಬಗೆ?" ಕಾಟ್ಯಾ ಕೇಳಿದಳು.

" ಅದನ್ನು ನಾನರಿಯೆ," ಅವರು ಉತ್ತರ ಕೊಟ್ಟರು; " ಪ್ರತಿಯೊಬ್ಬನ ರೀತಿ ಬೇರೆ. ಭಾವನೆಯಿದ್ದದ್ದೆ ನಿಜವಿದ್ದರೆ, ಅದು ತಾನೆ ಹೊರಬೀಳುವುದು. ಕಾದಂಬರಿಗಳನ್ನೋದುವಾಗ ಅಲ್ಲಿಯ ಲೆಫ್ಟಿನಂಟ ಸ್ಟ್ರೆಲ್‌ಸ್ಕಿಯಾಗಲಿ ಆಲ್ ಫ್ರೆಡನಾಗಲಿ 'ಎಲಿನೋರಾ, ನಾನು ನಿನ್ನನ್ನು ಪ್ರೀತಿಸುವೆನೆಂ'ದು ಹೇಳಿ ದೊಡನೆ ಏನಾದರೊಂದು ಘಟನೆ ಒದಗುವುದೆಂದಪೇಕ್ಷಿಸುವೆನು—ಮತ್ತೆ ಕೇಳಿದರೆ ಅವರಿಬ್ಬರಲ್ಲಿ ಏನೂ ಬದಲಾಗುವುದಿಲ್ಲ—ಅವರ ಕಣ್ಣು, ಮೂಗು, ಸ್ಥಿತಿಗತಿ ಇದ್ದಕ್ಕಿದ್ದಂತೆಯೆ ಇರುವುವು."

ಆಗಲೂ ಈ ಹಳಿದು ಮಾತನಾಡುವುದರಲ್ಲಿ ನನ್ನನ್ನುದ್ದೇಶಿಸಿ ಏನೊ ಕೊಂಕು ಮಾತಿತ್ತೆಂದೆನಿಸಿತು. ಕಾದಂಬರಿಗಳಲ್ಲಿಯ ನಾಯಕರಿಗೆ ತೋರಿಸಿದ ಅನಾದರ್ದ ಸಂಭಾವನೆ ಕಾಟ್ಯಳಿಗೆ ಸರಿದೋರಲಿಲ್ಲ.

" ನೀವು ಸುಸೂತ್ರವಾಗಿ ಎಂದೂ ಮಾತನಾಡುವುದಿಲ್ಲ," ಆಕೆ ಎಂದಳು; " ನಿಜವಾಗಿ ಹೇಳಿರಿ, ನೀವು ಯಾವ ಹೆಣ್ಣುಮಗಳಿಗೂ ಹೀಗೆ ಹೇಳಿರಲಿಕ್ಕಿಲ್ಲವೆ ? "

" ಎಂದೂ ಇಲ್ಲ—ಎಂದೂ ಜೋತುಕೊಂಡು ಹೋಗಿಲ್ಲ"—ಅವರು ನಗುತ್ತ ಉತ್ತರ ಕೊಟ್ಟರು ಮುಂದೆ ಎಂದೂ ಹೋಗಲಿಕ್ಕಿಲ್ಲ.

ಈ ಮಾತುಕತೆ ನಾನೀಗ ನೆನಪಿಗೆ ತಂದುಕೊಂಡೆ—ಅವರು ತಾವು ನನ್ನನ್ನು ಪ್ರೀತಿಸುವುದನ್ನು ಹೇಳುವ ಆವಶ್ಯಕತೆ ಉಳಿದಿರಲಿಲ್ಲ. " ಅವರು ನನ್ನನ್ನು ಪ್ರೀತಿಸುವರೆಂದು ನನಗೆ ಗೊತ್ತು" ಎಂದೆಂದುಕೊಂಡೆ; " ಅನಾಸ್ಥೆ ತೋರಿಸುವ ಅವರ ಎಲ್ಲ ಯತ್ನಗಳಿಂದ ನಾನು ಮೋಸ ಹೋಗಲಾರೆ."

ಆ ಸಂಜೆ ಅವರು ನನ್ನ ಜೊತೆಗೆ ಮಾತನಾಡಲಿಲ್ಲ–ಕಾಟ್ಯ್ಯಳ ಜೊತೆಗೂ ಸೋನ್ಯಳ ಜೊತೆಗೆ ಮಾತನಾಡಿದ ಪ್ರತಿ ಶಬ್ದದಲ್ಲಿ—ಅವರ ನೋಟದಲ್ಲಿ ಅವರ ನಡೆನುಡಿಯಲ್ಲಿ ನಾನು ಪ್ರೀತಿಯನ್ನೆ ಕಂಡೆ–ನನಗೆ ಸಂಶಯವುಳಿಯ ಲಿಲ್ಲ. ನನಗೊಂದೆ ಮಾತಿನ ಬಗೆಗೆ ಹೆಚ್ಚು ದುಃಖ—ಎಲ್ಲವೂ ಇಷ್ಟು ಸುಸ್ಪಷ್ಟವಾಗಿದ್ದು, ಎಣೆಯಿಲ್ಲದಷ್ಟು ಸುಖಿಯಾಗುವುದು ಸುಲಭಸಾಧ್ಯವಿದ್ದು ಇನ್ನೂ ತಮ್ಮ ಭಾವನೆಗಳನ್ನು ಬಚ್ಚಿಟ್ಟು ಅನಾಸ್ಥೆ ತೋರಿಸಬೇಕೆಂದೆನು ತ್ತಿತ್ತವರಿಗೆ ಬನದಲ್ಲಿ ನಾನವರೆಡೆಗೆ ಹಾರಿಕೊಂಡದ್ದು ಒಂದು ಅಪರಾಧ ವಾಗಿ ನನ್ನ ಮನದಲ್ಲಿ ಅಳುಕುತ್ತಿತ್ತು. ಅವರು ನನ್ನನ್ನು ಮನ್ನಿಸಲಿಕ್ಕಿಲ್ಲ— ನನ್ನ ಮೇಲೆ ಸಿಟ್ಟಾಗಿರಬೇಕು ಎಂದೆನಿಸುತ್ತಿತ್ತು ನನಗೆ.

ಚಹಾ ಮುಗಿದ ಮೇಲೆ ನಾನು ಪಿಯಾನೋದೆಡೆಗೆ ಹೊರಟೆ. ಅವರೂ ನನ್ನನ್ನು ಹಿಂಬಾಲಿಸಿದರು.

“ಏನಾದರೂ ನುಡಿಸಿರಿ—ಕೇಳಿ ಬಹಳ ದಿನಗಳಾದವು.” ನಡುಮನೆ ಯಲ್ಲಿ ನನ್ನ ಜೊತೆಗೆ ಬಂದು ಅವರೆಂದರು.

“ಅದನ್ನೆ ಮಾಡಬೇಕೆಂದಿದ್ದೆ,” ನಾನೆಂದೆ; ಆ ಮೇಲೆ ಅವರ ಮೋರೆಯಕಡೆಗೆ ನೇರವಾಗಿ ನೋಡುತ್ತ ಅವಸರದಿಂದೆಂದೆ; “ಸರ್ಜಿ ಮಿಕ್ಯಾ ಲಿಚ್ಛ್, ನೀವು ಸಿಟ್ಟಾಗಲಿಲ್ಲವಷ್ಟೆ?”

“ಅದೇನು?” ಅವರು ಕೇಳಿದರು.

“ನಾನು ನಿಮ್ಮ ಮಾತು ಮೀರಿದ್ದಕ್ಕಾಗಿ.” ನಾಚಿಕೆ ಸಾವಾಗಿ ನಾನೆಂದೆ.

ಅವರಿಗೆ ಗೊತ್ತಾಯಿತು ನನ್ನ ಮಾತಿನ ಅರ್ಥ. ಅವರು ತಲೆ ಅಲ್ಲಾ ಡಿಸಿ ಮೋರೆ ಮಾಡಿದರು–ಅದರ ಅರ್ಥವಿಷ್ಟೆ, ಬೈಯ್ಸಿಕೊಳ್ಳಲಿಕ್ಕೇ ನಾನರ್ಹ ಳಿದ್ದೆ, ಆದರೆ ಅದವರಿಂದಾಗಲಿಲ್ಲ.—ನನ್ನನ್ನು ಬೈಯುವುದು.

“ಹಾಗಾದರೆ ಈಗ ಎಲ್ಲವೂ ಸರಿಯಾಯಿತು–ನಾವು ಮೊದಲಿ ನಂತೆಯೆ?” ನಾನು ಪಿಯಾನೊದೆದುರಿಗೆ ಕುಳಿತುಕೊಳ್ಳುವಾಗೆಂದೆ.

“ಅರ್ಥಾತ್” ಅವರೆಂದರು.

ಆ ದಿವಾಣಖಾನೆಯಲ್ಲಿ– ಅದೊಂದು ಎತ್ತರವಾದ ಕೋಣೆ– ಪಿಯಾನೋದ ಮೇಲೆ ಎರಡು ಮಂಬತ್ತಿಗಳನ್ನು ಹಚ್ಚಿಟ್ಟಿತ್ತು—ಉಳಿದ ಎಲ್ಲೆಲ್ಲಿಯೂ ಅರೆಗತ್ತಲು. ಹೊರಗೆ, ತೆರೆದಿಟ್ಟ ಕಿಟಿಕಿಯಾಚೆ, ಬೇಸಿಗೆಯ ರಾತ್ರಿ ಥಳಥಳಿಸುತ್ತಿತ್ತು. ದೀಪವಿಲ್ಲದ ನಡುಮನೆಯಲ್ಲಿ ಕಾಟ್ಯಾ ನಡೆಯುತ್ತಿದ್ದಾಗ ಆಕೆಯ ಕಾಲ ಸಪ್ಪಳ- ಹೊರಗೆ ಕಿಟಕಿಯ ಕೆಳಗೆ ಅವರ ಕುದುರೆಯನ್ನು ಕಟ್ಟಿತ್ತು. ಅದು ಖೇಂಕರಿಸುತ್ತಿತ್ತು, ಖುರಗಳಿಂದ ನೆಲ ಕೆದುರುತ್ತಿತ್ತು—ಇವುಗಳನ್ನು ಬಿಟ್ಟರೆ ಎಲ್ಲೆಲ್ಲಿಯೂ ಸಬ್ಬು. ಅವರು ನನಗೆ ಕಾಣದಂತೆ ನನ್ನ ಹಿಂದೆ ಕುಳಿತಿದ್ದರು. ಆ ಅರೆಗತ್ತಲಲ್ಲಿ, ನನ್ನಿಂದ ಹೊರಡುವ ಸ್ವರಸ್ವರಕ್ಕೂ ಅವರ ಸಾಂನಿಧ್ಯದ ಅರಿವಾಗುತ್ತಿತ್ತು ನನಗೆ ಅವರು ಎಸೆದ ಪ್ರತಿಯೊಂದು ನೋಟ, ಪ್ರತಿಯೊಂದು ನಡೆನುಡಿ ನನ್ನೆದೆಯಲ್ಲಿ ತಿರುನುಡಿಯನ್ನು ನುಡಿಸುತ್ತಿತ್ತು. ಅವರೇ ತಂದು ಕೊಟ್ಟ ಮೋಝಾನ ಗೀತಿಯನ್ನು ನುಡಿಸುತ್ತಿದ್ದೆ. ಅದನ್ನು ನಾನು ಅವರಿದ್ದಾಗ ಅವರಿಗಾಗಿಯೆ ಕಲಿತಿದ್ದೆ. ನಾನು ನುಡಿಸುತ್ತಿದುದೇನೆಂಬುದನ್ನರಿಯದೆ ಚೆನ್ನಾಗಿ ನುಡಿಸಿದೆ—ಅವರಿಗೆ ಸಂತೋಷವಾಗಿರಬೇಕೆಂತಲೂ ನನಗೆನಿಸಿತು. ಅವರ ಸಂತೋಷದ ಅರಿಕೆ ನನಗಿತ್ತು—ಅವರು ಹಿಂದೆ ಕುಳಿತಿದ್ದರಾದರೂ ನನ್ನಲ್ಲಿ ನೆಟ್ಟ ಅವರ ನೋಟದ ಅರಿಕೆಯಾಯಿತು. ಯಾಂತ್ರಿಕ ಯೋಜನೆಯಂತೆ ನನ್ನ ಬೆರಳುಗಳನ್ನು ( ಪಿಯಾನೋವ ಮೇಲೆ) ಆಡಿಸುತ್ತ ಯದೃಚ್ಛೆಯಿಂದ ಅವರೆಡೆಗೆ ಹೊರಳಿ ನೋಡಿದೆ. ( ಅವರು ತಮ್ಮ ಕತ್ತು ಎರಡೂ ಕೈಗಳ ಮೇಲಿಟ್ಟಿದ್ದರು—ನನ್ನೆಡೆಗೆ ನೋಡಿದಾಗ ಅವರ ಕಣ್ಣುಗಳು ಮಿನುಗಿದುವು. ರಾತ್ರಿ ಅರಳಿತ್ತು— ಅವರ ಮುಖಭಾಗವು ಆ ಕರಿ ಪಾರ್ಶ್ವದಡಿಯಲ್ಲಿ ಎದ್ದು ಕಾಣುತ್ತಿತ್ತು. ) ಅವರ ನೋಟವನ್ನು ಎದುರಿಸಿ ನಾನು ನಸುನಕ್ಕು ಪಿಯಾನೊ ನುಡಿಸುವುದನ್ನು ನಿಲ್ಲಿಸಿದೆ. ಅವರೂ ನಕ್ಕು ಸಂಗೀತದೊಲೆಯ ಕಡೆಗೆ ನೋಡಿ ನನಗೆ ಸಿಟ್ಟು ಮಾಡಿದಂತೆ ಮಾಡಿ ಪಿಯಾನೊ ನುಡಿಸುವುದನ್ನು ಸಾಗಿಸಹೇಳಿದರು. ನಾನು ಸಂಗೀತವನ್ನು ನಿಲ್ಲಿಸಿದಾಗ ಚಂದ್ರನ ಬೆಳಕು ಹೆಚ್ಚಿತ್ತು—ಆತನೂ ಏರಿಕೆಯಲ್ಲಿದ್ದನು. ಕಾಟ್ಯಾ ನಾನು ಎಲ್ಲವನ್ನು ಮಸಣಿಸಿ ಬಿಟ್ಟೆನೆಂದು ಒದರಿಕೊಂಡಳು-ಗೀತಿಯನ್ನು ಉತ್ತಮೋತ್ತಮ ಭಾಗಕ್ಕೆ ನಿಲ್ಲಿಸಿದ್ದೆ ನುಡಿಸಿದ್ದಾದರೂ ಸರಿಯಾಗಿರಲಿಲ್ಲವೆಂದು. ಆದರೆ ಅವರು ಹೇಳಿ

ದರು ನಾನೆಂದೂ ಇಷ್ಟು ಸರಿಯಾಗಿ (ಪಿಯಾನೊ) ನುಡಿಸಿರಲಿಲ್ಲವೆಂದು. ಆಮೇಲವರು ಇತ್ತಿಂದತ್ತ ಅತ್ತಿಂದಿತ್ತ ಓಡಾಡತೊಡಗಿದರು—ದಿವಾಣಖಾನೆಯಿಂದ ನಡುಮನೆಗೆ (ಅಲ್ಲಿ ದೀಪವಿರಲಿಲ್ಲ) ನಡುಮನೆಯಿಂದ ದಿವಾಣಖಾನೆಗೆ. ಪ್ರತಿ ಸಲ ನನ್ನೆಡೆಗೆ ನೋಡಿ ನಸುನಗುತ್ತಿದ್ದರು. ನಾನೂ ನಕ್ಕೆ—ಕಾರಣವಿಲ್ಲದೆ ಗಟ್ಟಿಯಾಗಿ ನಗಬೇಕೆಂದೆನಿಸುತ್ತಿತ್ತು—ಆ ದಿನ ಏನೊ ಒಂದು ಘಟನೆ ಒದಗಿ ನಾನು ಸುಖಿಯಾಗಿದ್ದೆನು. ಕಾಟ್ಯಾ ಮತ್ತು ನಾನು ಪಿಯಾನೋದ ಹತ್ತರ ನಿಂತಿದ್ದೆವು—ಅವರು ದಿವಾಣಖಾನೆಯಿಂದ ಕಾಣದಂತಾದ ಕೂಡಲೆ ನಾನು ಆಕೆಯ ಕತ್ತೆತ್ತಿ ಅಲ್ಲಿ ಮುತ್ತಿಡುತ್ತಿದ್ದೆ—ಅವರು ಮರಳಿ ಬಂದ ತತ್‍ಕ್ಷಣ ಒಳ್ಳೆಯ ಗಂಭೀರ ಮೋರೆ ಮಾಡಿ ಹೊರ ಬೀಳಲಿರುವ ನಗೆಯನ್ನು ಪ್ರಯಾಸದಿಂದ ಬಿಗಿಹಿಡಿದಿಡುತ್ತಿದ್ದೆ.

"ಈಕೆಗೇವೊತ್ತು ಆಗಿದ್ದಾದರೂ ಏನು?" ಕಾಟ್ಯಾ ಅವರನ್ನು ಕೇಳಿದಳು.

ಅವರು ಉತ್ತರ ಕೊಡದೆ ನಕ್ಕರು. ನನಗೇನಾಗಿತ್ತೆಂಬುದು ಅವರಿಗೆ ಗೊತ್ತಿತ್ತು.

"ಇದು ನೋಡಿರಿ ರಾತ್ರಿ ಅದೆಷ್ಟು ಅರಳಿದೆ." ಎಂದು ನಡುಮನೆಯಿಂದ ನಮ್ಮನ್ನು ಕರೆದರು. ಅವರು ಕಮಾನಿನ ಕಿಟಕಿಯಾಚೆ ತೋಟದೆಡೆಗೆ ನೋಡುತ್ತಿದ್ದರು.

ನಾವು ಹೋದೆವು; ಅಷ್ಟು ಅಂದವಾದ ಇರುಳನ್ನು ನಾನೆಂದೂ ನೋಡಿರಲಿಲ್ಲ. ಪೂರ್ಣಚಂದ್ರನು ಮನೆಯ ಹಿಂದಿನಿಂದ ಎತ್ತರವಾಗಿ ಪ್ರಕಾಶಿಸುತ್ತಿದ್ದನು. ನಾವು ಆತನನ್ನು ನೋಡುತ್ತಿರಲಿಲ್ಲ—ನಮ್ಮ ಮನೆಯ ಚಪ್ಪರ, ವ್ಹರಾಂಡದ ಹುಸಿ, ಕಂಬ ಮುಂತಾದವುಗಳಿಂದ ಬಿದ್ದ ನೆಳಲು ಎದುರಿನ ಕಾಲದಾರಿ ಹುಲ್ಲುಗಾದುಗಳನ್ನರ್ಧಕ್ಕಿಂತ ಹೆಚ್ಚಾಗಿ ಮುಚ್ಚಿಬಿಟ್ಟಿತ್ತು. ಇದನ್ನು ಬಿಟ್ಟು ಎಲ್ಲೆಲ್ಲಿಯೂ ಬೆಳ್ದಿಂಗಳಿಂದ ಇಬ್ಬನ್ನಿಯಿಂದ ಬೆಳ್ಳಿಯ ಒಪ್ಪ ಕೊಟ್ಟಂತಾಗಿತ್ತು. ತೋಟದಲ್ಲಿಯ ಅಗಲ ದಾರಿ—ಅದರ ಒಂದು ಬದಿಗೆ ಡಾಲಿಯಾ ಬಳ್ಳಿಗಳೂ ಅವುಗಳಿಗೆ ಕೊಟ್ಟ ಸೊನ್ನಿಗೋಲುಗಳೂ ಬಾಗಿದ್ದುವು—ತಂಪುಗಟ್ಟಿ ಹೊಳೆದು ಮಂಜಿನಲ್ಲಿ ಕಾಣದಂತಾಗಿತ್ತು. ಗಿಡಗಳ ಗುಂಪಿನಲ್ಲಿ ಹಸರ

ಮನೆಯ ಚಪ್ಪರ ಕಾಣುತ್ತಿತ್ತು. ಕೊಳ್ಳದಿಂದ ಮಂಜಿನ ಉಬ್ಬಸ ಏರತೊಡಗಿತ್ತು. ಲಿಲ್ಯಾಕ್‌ದ ಝುಡುಪುಗಳು ಎಲೆ ಉದುರಿ ಒಳವರೆಗೆ ಬೆಳಗಿದ್ದುವು. ಹೂಗಳು ಇಬ್ಬನ್ನಿಯಿಂದ ತೊಯಿದಿದ್ದು ಅವುಗಳನ್ನು ಒಂದೊಂದನ್ನೆ ಎಣಿಸಬಹುದಾಗಿತ್ತು. ಗಿಡಗಳ ಸಾಲುಗಳಲ್ಲಿ ಕತ್ತಲು ಬೆಳಕುಗಳು ಬೆರೆತುಹೋಗಿ, ಗಿಡಗಳೂ ದಾರಿಗಳೂ ಆರುಪಾರು ಕಾಣುವ ಅಲೆದಾಡುವ ಮನೆಗಳಂತೆ ಕಾಣುತ್ತಿದ್ದುವು. ನಮ್ಮ ಬಲಕ್ಕೆ, ಮನೆಯ ನೆಳಲಲ್ಲಿ ಎಲ್ಲವೂ ಕರಿಗಪ್ಪು, ಸಾರಿಸಿದಂತೆ—ಅಂಜಿಕೆ ಬರುವಂತಿತ್ತು. ಆ ಸುತ್ತಲಿನ ಕತ್ತಲಿನ ಮೂಲಕವೆ ಎದ್ದು ಕಾಣುವ ಪಾಪ್ಲರ ಗಿಡವು—ಗೋಪುರ ಗೋಪುರವಾಗಿ ಬೆಳೆದ ಅದರ ಎಲೆಗಳು—ಏಕೊ ಏನೊ ಆ ಕರಿ ನೀಲಿ ಮುಗಿಲ ಮಾರಿಗೆ ಸಿಡಿದು ನಿಂತು ಕಾಣದಂತಾಗಿದೆ ಮನೆಯ ಬದಿಗೆ (ಅಲ್ಲಿಯೆ ಹಚ್ಚಿದ್ದರಿಂದ!) ಮೆರೆಯುತ್ತಿತ್ತು.

"ಅಡ್ಡಾಡಲಿಕ್ಕೆ ಹೋಗೋಣ," ನಾನೆಂದೆ.

ಕಾಟ್ಯಾ ಒಪ್ಪಿದಳು—ನನಗೆ ದಪ್ಪ ಕಾಲಚೀಲಗಳನ್ನು ಹಾಕಿಕೊಳ್ಳಲಿಕ್ಕೆ ಹೇಳಿದಳು.

"ಬೇಡ. ಸರ್ಜಿ ಮಿಕ್ಯಾಲಿಚ್‌ರು ನನ್ನ ಕೈ ಹಿಡಿಯುವರು." ನಾನೆಂದೆ.

ಈ ವ್ಯವಸ್ಥೆಯಿಂದ ನನ್ನ ಕಾಲುಗಳು ತೊಯುವುದು ಹೇಗೆ ನಿಲ್ಲುತ್ತಿತ್ತೊ! ಆದರೂ ನಮ್ಮ ಮೂವರಿಗೂ ನಾನು ಹೇಳಿದ್ದು ಒಪ್ಪಿಗೆಯಾಯಿತು ಆಗ. ಅವರೆಂದೂ ನನ್ನ ಕೈ ಮುಟ್ಟಿರಲಿಲ್ಲ—ಆದರೆ ಆ ದಿನ ತಾವಾಗಿ ಕೈ ಕೊಟ್ಟರು-ಅವರಿಗದರಲ್ಲಿ ಏನೊ ಅನಪೇಕ್ಷಿತವೆಂದೆನಿಸಲಿಲ್ಲ. ವ್ಹರಾಂಡ ಇಳಿದು ನಾವು ಮೂವರೂ ಕೂಡಿಯೆ ಹೊರಬಿದ್ದೆವು ಅಂದಿನ ಆ ಜಗತ್ತು, ಆ ತೋಟ, ಅಂದು ಬೀಸುವ ಗಾಳಿ, ಎಲ್ಲವೂ ಎಲ್ಲವೂ ನನಗೆ ನಾನರಿತಿದ್ದವಾಗಿರಲಿಲ್ಲ—ಬೇರೆಯಾಗಿದ್ದದುವು.

ನಾವು ಗಿಡಗಳ ಸಾಲುಗಳಲ್ಲಿ ನಡೆದಿದ್ದೆವು—ನಾನು ಕಣ್ಣೆತ್ತಿ ನೋಡಿದಾಗೆಲ್ಲ ನಾವು ಮುಂದೆ ಸಾಗುವುದು ಅಶಕ್ಯವೆಂತಲೂ ಭೂಮಿಯ ಮೇರೆಯೆ ಮುಗಿದಿರಬೇಕೆಂತಲೂ ಆ ನೋಟದ ಸೌಂದರ್ಯವೂ ಇದ್ದಕ್ಕಿಂದ್ದಂತೆ ಕಡೆಯಿಲ್ಲದೆ ಉಳಿಯುವುದೆಂತಲೂ ಗ್ರಹಿಕೆಯಾಯಿತು. ನಾವು ಹಾಗೇ ಸಾಗಿ

ದೆವು—ಆ ಮಾಟದ ಗೋಡೆ ಇಬ್ಭಾಗಾಗಿ ನಮಗೆ ದಾರಿ ಕೊಡುತ್ತ ನಡೆಯಿತು—ನಾವು ನೋಡುತ್ತ ಬಂದ ತೋಟ, ಗಿಡಗಳೂ, ಒಣಗಿದ ಎಲೆಗಳೂ ಕಾಲದಾರಿಗಳೂ ಇದ್ದಕ್ಕಿದ್ದಂತೆ ಇದ್ದುವು. ನಾವು ನಿಜವಾಗಿ ಕಾಲದಾರಿಗಳ ಮೇಲೆ ಕತ್ತಲು ಬೆಳಕುಗಳ ಪಟ್ಟಿಗಳನ್ನು ತುಳಿಯುತ್ತ ನಡೆದಿದ್ದೆವು. ಒಂದು ಒಣಗಿದ ಎಲೆ ನನ್ನ ಕಾಲ ಕೆಳಗೆ ಚಟಗುಟ್ಟಿತು—ಒಂದು ಚಿಗಿಯುತ್ತಿದ್ದ ಬಳ್ಳಿ ನನ್ನ ಮೈಗೆ ತಗಲಿತು ನನ್ನ ಬದಿಗೆ ನನ್ನ ಕೈ ಹಿಡಿದುಕೊಂಡು ನಡೆದಿರುವವರು ಅವರೆ—ನರಗುಡುತ್ತಿರುವ ಬೂಟುಗಳನ್ನು ಹಾಕಿಕೊಂಡು ಸಾಗಿದವಳು ಕಾಟ್ಯಳೆ. ಸ್ಥಿರವಾಗಿದ್ದ ಟೊಂಗಿಗಳಾಚೆಯಿಂದ ಇಣಿಕಿ ನೋಡುತ್ತಿರುವವನು ಮುಗಿಲಲ್ಲಿಯ ಚಂದ್ರಮನು.

ಹೆಜ್ಜೆಗೆ ಹೆಜ್ಜೆಗೆ ಆ ಮಾಟದ ಗೋಡೆ ನಮ್ಮ ಹಿಂದಿನಿಂದ ಮತ್ತು ಮುಂದೆಯೂ ಮುಚ್ಚುಮರೆ ಮಾಡುತ್ತಿತ್ತು—ಮುಂದೆ ಸಾಗಲು ಸಂಭವವಿದ್ದ ಬಗೆಗೆ ವಿಶ್ವಾಸವಿಡದಂತಾಗಿದೆ–ಎಲ್ಲದರ ಅಸ್ತಿತ್ವದ ಬಗೆಗೆ ವಿಶ್ವಾಸವಿಡದಾದೆ.

“ಅಮ್ಮಯ್ಯಾ! ಕಪ್ಪೆ!” ಕಾಟ್ಯಾ ಚೀರಿದಳು.

“ಅದು ಯಾರು ಹೇಳಿದ್ದು? ಅದೇಕೆ?” ನಾನೆಂದುಕೊಂಡೆ. ಕಾಟ್ಯಳೆ ಹೇಳಿದ್ದೆಂದು ತಿಳಿಯಿತು—ಆಕೆಗೆ ಕಪ್ಪೆಯ ಅಂಜಿಕೆ. ನಾನು ನೆಲದೆಡೆಗೆ ನೋಡಿದೆ–ಒಂದು ಸಣ್ಣ ಕಪ್ಪೆ ಟಂಣನೆ ಜಿಗಿದು ನನ್ನೆದುರಿಗೆ ಸ್ಥಿರವಾಯಿತು. ಅದರ ನೆಳಲು ಮಿನಗುವ ಮಣ್ಣಿನಲ್ಲಿ ಮೂಡಿತು.

“ನೀವು ಕಪ್ಪೆಗಂಜುವುದಿಲ್ಲವೆ?” ಅವರು ಕೇಳಿದರು.

ನಾನು ಹೊರಳಿ ಅವರೆಡೆಗೆ ನೋಡಿದೆ—ಲಿಂಬಿಯ ಗಿಡಗಳ ಸಾಲುಗಳಲ್ಲಿ ಒಂದು ಗಿಡದಷ್ಟು ಹುಸಿಯಿತ್ತು—ಅವರ ಮೋರೆ ನನಗೆ ಕಾಣುವಂತಿತ್ತು–ಅದೆಷ್ಟು ಚೆಲುವಾದದ್ದಿತ್ತು–ಸುಖ ಸಮಾಧಾನದಿಂದ ಊಂಕುತ್ತಿತ್ತು

ಅವರು ನನಗೆ ಕಪ್ಪೆಗಂಜುವ ಬಗೆಗೇ ಮಾತನಾಡಿದರು. “ನಾನು ನಿನ್ನನ್ನು ಪ್ರೀತಿಸುವೆನು, ನನ್ನ ಮುತ್ತು ಮಾಣಿಕವೆ!” ಎಂದೇ ಅವರಿಗೆ ಹೇಳುವುದಿತ್ತು. ಅವರ ನೋಟ, ನನ್ನ ಕೈಯಲ್ಲಿ ತೊಡಕಿಸಿದ ಕೈ “ನಾನು ನಿನ್ನನ್ನು ಪ್ರೀತಿಸುವೆನು” “ನಾನು ನಿನ್ನನ್ನು ಪ್ರೀತಿಸುವೆನು” ಎಂದುಸಿರು

ತ್ತಿದ್ದುವು—ನೆಳಲು ಬೆಳಕು ಸುತ್ತುಮುತ್ತಲಿನ ಎಲ್ಲವೂ ಅದನ್ನೆ ಮೇಲಿಂದ ಮೇಲೆ ಹೇಳತೊಡಗಿದುವು.

ನಾವು ತೋಟವನ್ನು ಸುತ್ತುಹಾಕಿದ್ದೆವು. ಕಾಟ್ಯೆಳ ಕಿರಿ ಹೆಜ್ಜೆಗಳು ನಮ್ಮನ್ನು ಸರಿಗೂಡಿ ನಡೆದಿದ್ದುವು—ಆಕೆ ದಣಿದು ಉಬ್ಬಸಬಡಲಿಕ್ಕೆ ಹತ್ತಿದ್ದಳು. ಮನೆಯೊಳಕ್ಕೆ ಹೋಗುವ ಸಮಯುವಾಯಿತೆಂದು ಆಕೆ ಎಂದಳು. 'ಪಾಪ' ಎಂದು ನಾನು ಕನಿಕರಪಟ್ಟೆ. "ನಮ್ಮಂತೆ ಆಕೆಗೂ ಏಕೆನಿಸುವುದಿಲ್ಲ? ನನ್ನಂತೆ, ಅವರಂತೆ, ಈ ರಾತ್ರಿಯಂತೆ ಭರದಲ್ಲಿ, ಸುಖಸಾಗರದಲ್ಲಿ ಓಲಾರಳೇಕೆ?"

ನಾವು ಮನೆಯೊಳಕ್ಕೆ ಹೋದೆವು-ಅವರು ತಮ್ಮ ಮನೆಗೆ ಹೋದದ್ದು ಎಷ್ಟೋ ಹೊತ್ತಿನ ನಂತರ ಕೋಳಿ ಕೂಗಿದುವು—ಮನೆಯಲ್ಲಿ ಎಲ್ಲರೂ ಮಲಗಿದ್ದರು—ಅವರ ಕುದುರೆ ಕಿಟಕಿಯ ಕೆಳಗೆ ಕಟ್ಟಿದ್ದು ಖೇಂಕರಿಸಿತು ಮತ್ತು ತನ್ನ ಖುರಗಳನ್ನು ಕಂಟೆಗಳ ಮೇಲೆ ಅಪ್ಪಳಿಸತೊಡಗಿತು. ಕಾಟ್ಯಾ ನಮಗೆ ವೇಳೆಯ ಎಚ್ಚರ ಕೊಡಲಿಲ್ಲ—ನಾವು ವೇಳೆಯ ಅರಿವಿಲ್ಲದೆ ಮಹತ್ತ್ವವಿಲ್ಲದ ಹರಟೆ ಕೊಚ್ಚುತ್ತ ಕುಳಿತೆವು. ಎರಡು ಘಂಟೆಯಾಗುವವರೆಗೆ ಅವರು ಮರಳಿ ಹೊರಟಾಗ ಕೋಳಿ ಮೂರನೆಯ ಸಲ ಕೂಗುತ್ತಿದ್ದುವು- ನಸುಕು ಹರಿಯುತ್ತಿತ್ತು; ಅಂದಿನಿಂದ ಅವರು ನನ್ನವರಾಗಿದ್ದರು—ಅವರನ್ನು ನಾನೆಂದೂ ಕಳೆದುಕೊಳ್ಳುವುದು ಶಕ್ಯವಿರಲಿಲ್ಲ. ನಾನವರನ್ನು ಪ್ರೀತಿಸುತ್ತಿದ್ದೆನೆಂದು ನನ್ನಲ್ಲಿಯೇ ಒಪ್ಪಿಕೊಂಡಮೇಲೆ ಕಾಟ್ಯೆಳನ್ನು ವಿಶ್ವಾಸದಲ್ಲಿ ತೆಗೆದುಕೊಂಡೆ. ಈ ಸುದ್ದಿಯಿಂದ ಆಕೆಗೆ ಸಂತೋಷವೆನಿಸಿತು, ನಾನು ಆಕೆಗೆ ಹೇಳಿದಾಗ ಒಳ್ಳೆಯ ಅಕ್ಕರತಿಯೆನಿಸಿತು. ಆದರೆ ಆ ದಿನ ಆಕೆ ಮಲಗಿಕೊಂಡಳು—ಆಕೆಗೆ ನಿದ್ರೆ ಹತ್ತಿತು. ನಾನೆ, ಬಹಳ ಹೊತ್ತಿನ ವರೆಗೆ ವ್ಹರಾಂಡದಲ್ಲಿ ಓಡಾಡಿದೆ - ತೋಟದಲ್ಲಿ ಹೋದೆ, ಅಲ್ಲಿ ಅವರ ಪ್ರತಿಯೊಂದು ಶಬ್ದ, ಅವರ ನಡೆನುಡಿಯ ನೆನಪು ಮಾಡಿಕೊಂಡೆ—ಅವೆ ಗಿಡಗಳ ಸಾಲುಗಳಲ್ಲಿ ನಡೆದಾಡಿದೆ ಆ ರಾತ್ರಿ ಎಲ್ಲ ಮಲಗಲೆ ಇಲ್ಲ—ನನ್ನ ಆಯುಷ್ಯದಲ್ಲಿ ಮೊದಲನೆಯ ಸಲವೆ ನಸಕು ಸೂರ್ಯೋದಯಗಳನ್ನು ಕಂಡೆ. ಅಂಥ ರಾತ್ರಿ, ಅಂಥ ಮುಂಜಾವು ಮುಂದೆ ನಾನೆಂದೂ ನೋಡಲಿಲ್ಲ. "ನಾನು ನಿನ್ನನ್ನು ಪ್ರೀತಿಸುವೆನೆಂದು ಅವರು ಸ್ಪಷ್ಟವಾಗಿ ಏಕೆ ಹೇಳುವುದಿಲ್ಲ?" ನಾನೆಂದುಕೊಂಡೆ; "ಎಲ್ಲವೂ ಇಷ್ಟು ಸುಲ

ಭವೂ ಸುಸೂತ್ರವೂ ಇದ್ದಿರಲಿಕ್ಕೆ ಅಲ್ಲದ ತಡೆಗಳನ್ನೇಕೆ ನಿರ್ಮಾಣ ಮಾಡು ವರು! —ತಮಗೆ ವಯಸಾಯಿತೆಂದೇಕೆ ಹೇಳಿಕೊಳ್ಳುವರು! ಈಗಿನ ಈ ವೇಳೆ ಮುಂದೆ ಬರಲಾರದು, ಅದನ್ನೇಕೆ ಕಳೆದುಕೊಳ್ಳುವರು? ನಾನು ನಿನ್ನನ್ನು ಪ್ರೀತಿಸುವೆನು ಎಂದು ಸ್ಪಷ್ಟವಾಗಿ ಹೇಳಲಿಲ್ಲ! —ನನ್ನ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು "ನಾನು ನಿನ್ನನ್ನು ಪ್ರೀತಿಸುವೆನು" ಎಂದು ಹೇಳಲಿ. ತಾವೆ ನಾಚಿ ತಲೆ ತಗ್ಗಿಸಲಿ. ಆಮೇಲೆ ನಾನೆಲ್ಲವನ್ನು ಹೇಳು ವೆನು–ಇಲ್ಲ–ನಾನೇನನ್ನೂ ಹೇಳುವುದಿಲ್ಲ–ನಾನವರನ್ನಪ್ಪಿಕೊಂಡು ಕಣ್ಣೀರು ಸುರಿಸುವೆನು." ಅಷ್ಟರಲ್ಲಿ ಮತ್ತೊಂದು ವಿಚಾರ ಬಂದಿತು—"ನಾನೂ ತಪ್ಪು ತಿಳಿದುಕೊಂಡಿದ್ದರೆ! –ಅವರು ನನ್ನನ್ನು ಪ್ರೀತಿಸುತ್ತಿಲ್ಲವಾಗಿದ್ದರೆ!– "

ಈ ಅಂಜಿಕೆಯಿಂದ ನಾನು ತತ್ತರಿಸಿದೆ—ಹಾಗೇ ನನ್ನ ವಿಚಾರಗಳೆಲ್ಲಿ ಮುಟ್ಟುತ್ತಿದ್ದುವೊ ದೇವರೆ ಬಲ್ಲ. ನಾನು ಬನದಲ್ಲಿ ಹಾರಿಕೊಂಡಾಗ ಅವ ರಿಗೆ ಕಚ್ಚೆನಿಸಿದ್ದು ನೆನೆದುಕೊಂಡೆ—ನನ್ನೆದೆಯು ಜಡವಾಯಿತು. ನನ್ನ ಕಣ್ಣಿನಿಂದ ನೀರು ಸುರಿಯಲಾರಂಭಿಸಿದುವು. ನಾನು ದೇವರಿಗೆ ಬೇಡಿಕೊ ಳ್ಳತೊಡಗಿದೆ. ನನ್ನನ್ನು ಸಮಾಧಾನಗೊಳಿಸಿ ನನ್ನಲ್ಲಿ ಆಶೆಯನ್ನು ಹುಟ್ಟಿ ಸುವ ಹೊಸ ವಿಚಾರವೊಂದು ಬಂದಿತು. ಆ ದಿನವೆ ನಾನು ಉಪವಾಸ (ವ್ರತ) ಕ್ಕೆ ಪ್ರಾರಂಭ ಮಾಡಬೇಕು, ನನ್ನ ಹುಟ್ಟಿದ ದಿನ ದೀಕ್ಷೆ ತೆಗೆದುಕೊ ಳ್ಳಬೇಕು ಅದೆ ದಿನ ಅವರ ಕೂಡ ವಾಗ್ದಾನ ಮಾಡಬೇಕು–ಇದೆ ಆ ವಿಚಾರ.

ಈ ಯೋಜನೆ ಹೇಗೆ ಪಾರಾಗಬಹುದೆಂಬುದರ ಬಗೆಗೆ ನನಗೆ ಕಲ್ಪನೆ ಯಿರಲಿಲ್ಲ. ಆ ಕ್ಷಣದಿಂದ ಎಲ್ಲವೂ ನನ್ನ ಸಂಕಲ್ಪದಂತೆ ಒದಗುವುದೆಂದು ನಾನು ನಂಬಿದೆ. ನಸಕು ಪೂರಾ ಹರವಾಯಿತು— ಕೂಲಿಯಾಳುಗಳು ಏಳ ತೊಡಗಿದ್ದರು— ನಾನು ನನ್ನ ಕೋಣೆ ಸೇರಿದೆ.

## ಪರಿಚ್ಛೇದ ೪

ಉಪವಾಸವು ಆಗಸ್ಟ ತಿಂಗಳಲ್ಲಿ ಬಿದ್ದಿತು—ನನ್ನ ಉಪವಾಸದ ಸಂಕ ಲ್ಪದಿಂದ ಯಾರಿಗೂ ಅಚ್ಚರಿಯೆನಿಸಲಿಲ್ಲ.

ಆ ಇಡಿ ವಾರ ಅವರು ನಮ್ಮನ್ನು ಕಾಣುವುದಕ್ಕೆ ಬರಲಿಲ್ಲ; ಅವರು ಬಾರದಿರುವುದರಿಂದ ನನಗೆ ಅಚ್ಚರಿ, ಸಿಟ್ಟು, ಅಸ್ವಸ್ಥತೆ, ಯಾವುದೂ ಎನಿಸಲಿಲ್ಲ. ನನಗೆ ಆನಂದವೆ ಎನಿಸಿತು—ನನ್ನ ಹುಟ್ಟಿದ ದಿನಕ್ಕಿಂತ ಮೊದಲು ನಾನವರನ್ನು ನಿರೀಕ್ಷಿಸಿರಲಿಲ್ಲ. ಆ ವಾರ ಪ್ರತಿ ದಿನ ನಾನು ಒಳ್ಳೆಯ ನಸುಕಿನಲ್ಲಿ ಏಳುತ್ತಿದ್ದೆ. ಗಾಡಿಗೆ ಕುದುರೆಗಳನ್ನು ಹೂಡುತ್ತಿರುವಾಗ ತೋಟದಲ್ಲಿ ಓಡಾಡುತ್ತಿದ್ದೆ—ಆಗ ಮನಸಿನಲ್ಲಿ ಹಿಂದಿನ ದಿನ ತಂದ ಪಾಪ ವಿಚಾರಗಳ ಬಗೆಗೆ ಮನನ ಮಾಡುತ್ತಿದ್ದೆ—ಆ ದಿನದ ಕಾರ್ಯಕ್ರಮವನ್ನು ನಿಶ್ಚಯಿಸುತ್ತಿದ್ದೆ, ಆ ದಿನವು ಯಾವ ಪಾಪ ವಿಚಾರದಿಂದಲೂ ಅಲಿಪ್ತವಿರಬೇಕೆಂದೂ ನಾನು ಸಮಾಧಾನ ಹೊಂದಬೇಕೆಂದೂ, ಪಾಪ ವಿಚಾರಗಳಿಂದ ತೀರ ಅಲಿಪ್ತವಾಗಿರುವುದು ನನಗಾಗ ಒಳ್ಳೆಯ ಸುಲಭವೆನಿಸುತ್ತಿತ್ತು—ಸ್ವಲ್ಪ ಶ್ರಮಪಟ್ಟರೆ ತೀರಿತು. ಗಾಡಿ ಬಂದಕೂಡಲೆ ಕಾಟ್ಯನನ್ನಾಗಲಿ ಒಬ್ಬ ತೊತ್ತನ್ನಾಗಲಿ ಜೊತೆಗೆ ಕರಕೊಳ್ಳುತ್ತಿದ್ದೆ—ಆಮೇಲೆ ಎರಡ ಮೈಲು ದೂರವಿದ್ದ ದೇವಾಲಯಕ್ಕೆ ಹೊರಡುತ್ತಿದ್ದೆವು. ದೇವಾಲಯದಲ್ಲಿ ಪ್ರವೇಶಿಸುವಾಗ "ದೇವಾಲಯಕ್ಕೆ ದೇವರನ್ನಂಜಿಕೊಂಡು ಬನ್ನಿ" ಎಂಬವರಿಗೆ ಸರಿಯಾದ ಪ್ರಾರ್ಥನೆಯನ್ನು ನೆನೆದುಕೊಂಡೆ,—ಅದಕ್ಕೆ ತಕ್ಕ ಮನ ಸ್ಥಿತಿಯನ್ನು ಕಟ್ಟಡಕ್ಕೆ ಮುಟ್ಟಿಸುವ ಎರಡು ಹುಲ್ಲು ಬೆಳೆದ ಮೆಟ್ಟಿಲಗಳನ್ನೇರುವಾಗ ತಂದುಕೊಂಡೆ ಆಗ ಹತ್ತು ಹನ್ನೆರಡು ಜನ ಬಕ್ತರು—ಉಪವಾಸ ಮಾಡಿದ ಮನೆಯಾಳುಗಳೂ ಬೇಸಾಯಗಿತ್ತಿಯರೂ ಇದ್ದರು. ಅವರು ನನಗೆ ನಮಸ್ಕರಿಸಿದರು—ನಾನೂ ಅವರಿಗೆ ಪ್ರತಿಯಾಗಿ ವಿಶೇಷವಾದ ನಮ್ರತೆಯಿಂದ ನಮಸ್ಕರಿಸಿದೆ. ಆಮೇಲೆ ಒಳ್ಳೆಯ ಧೈರ್ಯಪಟ್ಟು—ಅದೆ ಒಳ್ಳೆಯ ಧೈರ್ಯದ ಕೆಲಸವೆಂದು ತಿಳಿದುಕೊಂಡಿದ್ದೆ—ಮುಂಬತ್ತಿ ಮಾರುತ್ತಿದ್ದವನ ಕಡಿಂದ ಮುಂಬತ್ತಿಗಳನ್ನು ತೆಗೆದುಕೊಂಡೆ—ಆತನೊಬ್ಬ ಮುದಿ ಸೈನಿಕ, ದೇವಾಲಯದ ಪಾರುಪತ್ಯಗಾರ, ಮಂಬತ್ತಿಗಳನ್ನು ಮೂರ್ತಿಗಳೆದುರಿಗೆ ಹಚ್ಚಿಟ್ಟೆ. ವೇದಿಯು ಮರೆಯಾಗುವಂತಿಟ್ಟ ತೆರೆಕಟ್ಟಿನ ನಡುವಿನ ಬಾಗಿಲಿಂದ ನಮ್ಮ ತಾಯಿ ತಯಾರಿಸಿದ ವೇದಿಗೆ ಹೊದಿಸಿದ ವಸ್ತ್ರವು ಕಾಣುತ್ತಿತ್ತು. ತೆರೆಕಟ್ಟುಗಳ ಮೇಲೆ ಎರಡು ದೇವಮೂತರ ಚಿತ್ರಗಳಿದ್ದುವು. ನಾನು ಚಿಕ್ಕವಳಿದ್ದಾಗ ಈ ಚಿತ್ರಗಳು ಅಜಸ್ರ ಕಾಣುತ್ತಿದ್ದುವು—ಪ್ರಭಾವಲಯಯುಕ್ತವಾದ ದೈವಿ ಪಕ್ಷಿಯೆ ಎಂದಿನಿಂದ

ನನ್ನನ್ನು ಮೋಹಿಸಿತ್ತು. ಸ್ತೋತ್ರ ಶಾಲೆಯ ಹಿಂದೆ ಒಡೆದು ತುಂಡಾದ ಜಲಕುಂಡವೊಂದಿತ್ತು—ಅಲ್ಲಿಯೆ ನನ್ನ ನಾಮಕರಣವಾಗಿತ್ತು—ಅದೆ ನಮ್ಮ ಮನೆಯಾಳುಗಳ ಎಷ್ಟೊ ಮಕ್ಕಳಿಗೆ ಮಾತೃಕಸ್ಥಾನವನ್ನು ವಹಿಸಿತ್ತು. ಮುದುಕ ಅರ್ಚಕನು ಹೊರಗೆ ಬಂದನು. ನಮ್ಮ ತಂದೆಯವರ ಪ್ರೇತದ ಪೆಟ್ಟಿಗೆಯ ಮೇಲೆ ಹೊದಿಸಿದ ವಸ್ತ್ರದಿಂದ ಮಾಡಿದ ನಿಲುವಂಗಿಯನ್ನು ತೊಟ್ಟಿದ್ದನು—ಆತ ಒಂದೆ ಒಂದು ದನಿ ತೆಗೆದು ಪಾರಾಯಣ ಮಾಡತೊಡ ಗಿದನು— ಆ ದನಿ ನಾನು ಚಿಕ್ಕಂದಿನಿಂದ ಕೇಳುತ್ತ ಬಂದಿದ್ದೆ. ನಮ್ಮ ಮನೆ ಯಲ್ಲಿಯ ಪಾರಾಯಣದಲ್ಲಿ, ಸೋನ್ಯಳ ನಾಮಕರಣದಲ್ಲಿ, ನಮ್ಮ ತಂದೆಯ ವರ ಸ್ಮರಣಾರ್ಥವಾಗಿದ್ದ ಪ್ರಾರ್ಥನೆಯಲ್ಲಿ, ನಮ್ಮ ತಾಯಿಯ ಅಂತ್ಯೇಷ್ಟಿ ಯಲ್ಲಿ ಸ್ತೋತ್ರಶಾಲೆಯಿಂದ ಅರ್ಚಕನ ಅದೆ ನಡುಗುವ ದನಿ ಕೇಳಬರುತ ಲಿತ್ತು. ದೇವಾಲಯದಲ್ಲಿ ಪ್ರತಿಸಲ ಪ್ರಾರ್ಥನೆಯ ಕಾಲಕ್ಕೆ ಕಾಣುವ ಅದೆ ಆ ಮುದಿಕಿ ಗೋಡೆಗೆ ಔತುಕೊಂಡು ಕಣ್ಣೀರು ತುಂಬಿದ ತನ್ನ ಕಣ್ಣುಗ ಳನ್ನು ಸ್ತೋತ್ರಶಾಲೆಯಲ್ಲಿಯ ಒಂದು ಮೂರ್ತಿಯಲ್ಲಿ ನೆಟ್ಟಿಸಿ ಕೈ ಬೆರಳುಗ ಳನ್ನು ತನ್ನ ಕರ ವಸ್ತ್ರದಲ್ಲಿ ತೊಡಗಿಸಿ ಹಲ್ಲಿಲ್ಲದ ಬಾಯಿಂದ ಪುಟಪುಟಿಸುತ್ತಿ ದ್ದಳು. ಈ ಎಲ್ಲ ವಸ್ತು ಮಾತ್ರಗಳು ನನಗೆ ಪೂರ್ಣ ಸ್ಮೃತಿಯ ಸಂಬಂಧ ದಿಂದ ಕೇವಲ ಕುತೂಹಲದ ವಿಷಯಗಳಾಗಿರಲಿಲ್ಲ—ಪ್ರತಿಯೊಂದು ಮಹ ತ್ವದ್ದೂ ಪವಿತ್ರವೂ ಆಗಿತ್ತು—ಪ್ರತಿಯೊಂದರಲ್ಲಿ ಗೂಢಾರ್ಥವಿದ್ದಂತೆನಿಸಿತು. ಪ್ರಾರ್ಥನೆಯ ಪ್ರತಿಯೊಂದು ಶಬ್ದವನ್ನು ಕೇಳಿ ನನ್ನ ಭಾವನೆಗಳನ್ನು ಅದಕ್ಕೆ ಸರಿಪಡಿಸತೊಡಗಿದೆ. ನನಗೆ ತಿಳಿಯದಾದಲ್ಲಿ ದೇವರು ನನಗೆ ಪ್ರಕಾಶಕೊಡ ಲೆಂದು ಬೇಡಿಕೊಂಡೆ-ನನಗೆ ಕೇಳದಾದಲ್ಲಿ ನನ್ನದೆ ಒಂದು ಹೊಸ ಪ್ರಾರ್ಥನೆ ಯನ್ನು ಮಾಡಿಕೊಂಡೆ. ಅನುತಾಪದ ಪ್ರಾರ್ಥನೆ ನಡೆದಾಗ ನಾನು ನನ್ನ ಕಳೆದು ಹೋದ ಆಯುಷ್ಯವನ್ನು ನೆನೆದುಕೊಂಡೆ. ಆ ನನ್ನ ನಿರಾಗಸ ಬಾಲ್ಯವು ಈಗಿನ ನಿರಾತಂಕ ಮನಸ್ಥಿತಿಯ ಒರೆಗೆ ಹಚ್ಚಿದಾಗ ಪಾಪಮಯವೆಂದು ಕಂಡಿತು. ನಾನು ಕಣ್ಣೀರು ಸುರಿಸಿದೆ, ಬಹಳ ನೊಂದುಕೊಂಡೆ. ಆ ಎಲ್ಲ ಪಾಪಗಳ ಕ್ಷಾಲನೆಯಾಗುವುದು—ಪಾಪದ ಘನತೆಯಂತೆ ಅನುತಾಪವೂ ಅಷ್ಟು ಬೆಲೆಯುಳ್ಳದ್ದಾಗುವುದು. ಪ್ರಾರ್ಥನೆಯ ಕೊನೆಗೆ ಅರ್ಚಕನು "ದೇವರು ಆಶೀರ್ವದಿಸಲಿ ನಿನ್ನನ್ನು" ಎಂದಾಗ ನನ್ನ ದೈಹಿಕ ಬಲವು ಹೆಚ್ಚಿ

ದಂತೆನಿಸಿತು—ನನ್ನೆದೆಯಲ್ಲಿ ಅಭೂತಪೂರ್ವವಾದ ಪ್ರಕಾಶ, ಅನನುಭೂತವಾದ ಸ್ನೇಹ ತುಂಬಿಕೊಂಡಂತೆನಿಸಿತು. ಪ್ರಾರ್ಥನೆ ಮುಗಿದ ಕೂಡಲೆ ಅರ್ಚಕನು ಶಾಂತಿಪಾಠಕ್ಕಾಗಿ ಮನೆಗೆ ಬರಬೇಕೊ, ಬರುವುದಾದರೆ ನನಗೆ ಯಾವಾಗ ಅನುಕೂಲವಾಗಬಹುದು, ಎಂದುಮುಂತಾಗಿ ಕೇಳಿದನು. ಆತನು ಸೂಚಿಸಿದ್ದು ನನಗೆ ಸರಿಯೆನಿಸಬೇಕೆಂದು ಸ್ನಾನೇ ಗಾಡಿಯಲ್ಲಿ ಕುಳಿತಾಗಲಿ ನಡೆಯುತ್ತಾಗಲಿ ದೇವಾಲಯಕ್ಕೆ ಬರುವೆನೆಂದು ತಿಳಿಸಿದೆ.

"ತೊಂದರೆಯಾಗಲಿಕ್ಕಿಲ್ಲವೆ ನಿಮಗೆ?" ಆತನು ಕೇಳಿದನು. ಎಲ್ಲಿ ಅಭಿಮಾನವೆಂಬ ಪಾಪಕ್ಕೆ ಗುರಿಯಾಗುವೆನೊ ಏನೋ ಎಂದು ಉತ್ತರವನ್ನೇನು ಕೊಡಬೇಕೆಂಬುದು ತಿಳಿಯದಾಯಿತು. ಶಾಂತಿಪಾಠ ಮುಗಿದ ನಂತರ, ಕಾಟ್ಯ ನನ್ನ ಜೊತೆಗಿಲ್ಲದಿದ್ದರೆ, ನಾನು ಗಾಡಿಯನ್ನು ಮನೆಗೆ ಕಳಿಸಿ ಒಬ್ಬಳೆ ನಡೆದುಹೋಗುತ್ತಿದ್ದೆ. ದಾರಿಯಲ್ಲಿ ಎಲ್ಲರಿಗೂ ನಮ್ರತೆಯಿಂದ ನಮಸ್ಕರಿಸುತ್ತಿದ್ದೆ—ಸಾಹಾಯ್ಯ ಸೂಚನೆಗಳನ್ನು ಕೊಡುತ್ತಿದ್ದೆ. ಯಾರಿಗಾದರೂ ಅನುವಾಗಬೇಕು—ಗಾಡಿ ಬಿದ್ದಿದ್ದರೆ ಹೆಗಲ ಕೊಡಬೇಕು—ತೊಟ್ಟಿಲ ಜೀಕಬೇಕು—ನಾನು ರೊಜ್ಜಿನಲ್ಲಿ ನೂಕಿಕೊಂಡು ಉಳಿದವರಿಗೆ ದಾರಿ ಮಾಡಿಕೊಡಬೇಕು, ಮುಂತಾಗಿ ತ್ಯಾಗಬುದ್ಧಿ ತೋರಿಸಲು ಹಾತೊರೆಯುತ್ತಿದ್ದೆ. ಒಂದು ದಿನ ನಮ್ಮ ಗುಮಾಸ್ತ ಕಾಟ್ಯಳಿಗೆ ಹೇಳುವುದನ್ನು ಕೇಳಿದೆ ನಮ್ಮ ಜೀತದ ಆಳು ಸಿಮ್ಯನ್‌ನ ಮಗಳು ತೀರಿಕೊಂಡಿದ್ದಳಂತೆ. ಆಕೆಯ ಪ್ರೇತದ ಪೆಟ್ಟಿಗೆಗಾಗಿ ಸಿಮ್ಯನ್‌ನು ಹಲಿಗೆಗಳನ್ನೂ ಅರ್ಚಕನಿಗಾಗಿ ಒಂದು ರೂಬಲ್ಲೂ ಬೇಡಲಿಕ್ಕೆ ಬಂದಿದ್ದನಂತೆ ಗುಮಾಸ್ತನು ಆತನು ಬೇಡಿದ್ದನ್ನು ಕೊಟ್ಟಿದ್ದನು. "ಅವರಿಷ್ಟು ಬಡವರಿದ್ದಾರೆ?" ನಾನು ಕೇಳಿದೆ. "ತೀರ ಬಡವರು, ಅಮ್ಮನವರೆ," ಗುಮಾಸ್ತನುತ್ತರ ಕೊಟ್ಟ; "ಅವರ ಬಾಯಿಗೆ ಉಪ್ಪು ಕಂಡಿಲ್ಲ" ಅದನ್ನು ಕೇಳಿ ನಾನು ವ್ಯಸನಪಟ್ಟೆ, ಆದರೆ ಒಂದು ಬಗೆಯಿಂದ ಸಂತೋಷಪಟ್ಟೆ. ನಾನು ಅಡ್ಡಾಡಿ ಬರುವೆನೆಂದು ಕಾಟ್ಯಳಿಗೆ ನೆವ ಹೇಳಿ ಮೇಲುಪ್ಪರಿಗೆಗೆ ಓಡಿದೆ. ನನ್ನ ಕಡೆಗೆ ಇದ್ದ ಬಿದ್ದ ದ್ರವ್ಯವನ್ನು—ಅದೇನು ಹೇಳಿಕೊಳ್ಳುವಷ್ಟಿರಲಿಲ್ಲವಾದರೂ ನನ್ನ ಕಡೆಗಿದ್ದ ಎಲ್ಲ ದ್ರವ್ಯವನ್ನು ತೆಗೆದುಕೊಂಡು ವೃಂದಾಂತ, ತೋಟ ಎಂದು ದಾಟುತ್ತ ದಾಟುತ್ತ ಒಬ್ಬಳೆ ಸಿಮ್ಯನ್‌ನ ಗುಡಿಸಲಿಗೆ ಹೊರಟೆ. ಗುಡಿಸಲು ಊರ ಕಟ್ಟಕಡೆಗಿತ್ತು—ನಾನು ಕಿಟಕಿಗೆ ಹೋದದ್ದು

ಯಾರೂ ನೋಡಲಿಲ್ಲ—ನಾನು ದ್ರವ್ಯವನ್ನು ಕಿಟಕಿಯ ಎರವಿಗಿಟ್ಟು ಬಾಗಿಲ ತಟ್ಟಿದೆ. ಹೊರಬಾಗಿಲ ತೆರೆದು ಯಾರೊ ಬಂದು ನನ್ನನ್ನು ಕೂಗಿದರು. ನಾನು ಅಪರಾಧಿಯಂತೆ ತಣ್ಣಗಾಗಿ ನಡುಗುತ್ತ ಮನೆ ಕಂಡೆ. ಕಾಟ್ಯಾ ನನಗೆ "ಎಲ್ಲಿ ಹೋಗಿದ್ದಿ, ಏನಾಯಿತು" ಎಂದು ಕೇಳಿದಳು. ನಾನು ಉತ್ತರ ಕೊಡಲಿಲ್ಲ. ಆಕೆಯ ಮಾತೆ ತಿಳಿಯಲಿಲ್ಲ ನನಗೆ. ಎಲ್ಲವೂ ನನಗೆ ಕ್ಷುಲ್ಲಕ ಮತ್ತು ಅರ್ಥವಿಲ್ಲದ್ದಾಗಿ ತೋರಿತು. ನಾನು ನನ್ನ ಕೋಣೆಗೆ ಹೋಗಿ ಬಾಗಿಲ ಮುಚ್ಚಿಕೊಂಡೆ—ಅತ್ತಿಂದಿತ್ತ ಇತ್ತಿಂದತ್ತ ಓಡಾಡಿದೆ—ವಿಚಾರ ಮಾಡದಾದೆ– ನನ್ನ ಭಾವನೆಗಳನ್ನು ಅರಿಯದಾದೆ. ನಾನು ಆ ಬಡ ಕುಟುಂಬದ ಆನಂದವನ್ನು ಮನಸಿನಲ್ಲಿ ಚಿತ್ರಿಸಿದೆ—ತಮ್ಮ ಉಪಕಾರಕರ್ತೃವನ್ನು ಅವರು ಹೇಗೆ ಕೊಂಡಾಡುವರೆಂದು ಕಲ್ಪಿಸಿದೆ– ನಾನೆ ಕೈಯಿಂದ ಆ ದ್ರವ್ಯವನ್ನು ಕೊಡಲಿಲ್ಲವೆಂದು ಅನುತಾಪಪಟ್ಟೆ. ಸರ್ಜಿ ಮಿಕ್ಯಾಲಿಚ್ಚರು ಏನೆನ್ನುವರೊ ಎಂದುಕೊಂಡೆ—ನಾನು ಮಾಡಿದ್ದು ಯಾರಿಗೂ ತಿಳಿಯಲಾರದೆಂಬುದಕ್ಕೆ ಹಿಗ್ಗಿದೆ. ನಾನು ಸುಖಿಯಾಗಿದ್ದೆ—ನಾನಾಗಲಿ, ಉಳಿದವರಾಗಲಿ ಅಸಜ್ಜನರೆಂದುಕೊಂಡೆ—ಆದರೂ ನನ್ನ ಬಗೆಗೆ, ಇಡಿ ಜಗತ್ತಿನ ಬಗೆಗೆ ಕರುಣಾಳು ದೃಷ್ಟಿಯಿಂದ ನೋಡಿದೆ—ಸಾವಿನ ವಿಚಾರವೂ ಸುಖದ ಕನಸಾಗಿ ಬಂದಿತ್ತು. ಪ್ರಾರ್ಥನೆ ನಡೆದಾಗ ನಾನು ಸೂಕ್ತಗಳನ್ನೋದುತ್ತಿದ್ದೆ. ಬರಬರುತ್ತ ನನಗೆ ಆ ಗ್ರಂಥವು ಹೆಚ್ಚೆಚ್ಚು ಸುಗಮವಾಗತೊಡಗಿತ್ತು. ಅಲ್ಲಿಯ ಸಚ್ಚರಿತ್ರೆಗಳು ಹೆಚ್ಚು ಸುಲಭಗಮ್ಯವಾಗಿಯೂ ಸ್ಪೃಹಣೀಯವಾಗಿಯೂ ಕಂಡುಬಂದುವು—ಅವುಗಳನ್ನರಿತುಕೊಳ್ಳಲೆಸಗಿದ ನನ್ನ ಭಾವನೆಗಳು ಗತಿರಿಕ್ತವಾಗಿಯೂ ಅಗಮ್ಯವಾಗಿಯೂ ಆಗಿ ಪರಿಣಮಿಸಿದುವು. ಈ ಗ್ರಂಥವನ್ನೋದಿ ಎದ್ದಕೂಡಲೆ ಎಲ್ಲವೂ ಎಷ್ಟು ಸುಲಭ ಮತ್ತು ನಿಚ್ಚಳವೆಂಬುದು ತೋರಿತು. ಆಯುಷ್ಯವನ್ನು ಕೀಳ ರೀತಿಯಿಂದ ಕಳೆಯುವುದು ಅದೆಷ್ಟು ಕಠಿನ—ಎಲ್ಲರನ್ನು ಪ್ರೀತಿಸುವುದು, ಎಲ್ಲರ ಪ್ರೇಮವನ್ನು ಗಳಿಸುವುದು ಅದೆಷ್ಟು ಸುಲಭ. ನನ್ನ ಬಗೆಗೆ ಎಲ್ಲರೂ ಅದೆಷ್ಟು ದಯೆಯುನ್ನುಳ್ಳವರೂ ಮಮತೆಯನ್ನುಳ್ಳವರಾಗಿದ್ದರು. ಸೋನ್ಯಾ—ಆಕೆಯ ಓದಿಗೆ ನಾನು ತಡೆ ತಂದಿರಲಿಲ್ಲ—ಆಕೆಯೂ ನನಗೆ ಬೇರೆಯಾಗಿ ಕಂಡಳು—ವಿಷಯಗಳನ್ನು ತಿಳಿದುಕೊಂಡು ನನ್ನ ತಲೆ ಕೆಡಿಸದಂತೆ ಪ್ರಯತ್ನಪಡುತ್ತಿದ್ದಳು. ಎಲ್ಲರೂ ನಾನವರಲ್ಲಿ ನಡೆದುಕೊಂಡಂತೆ ನಡೆದುಕೊಳ್ಳುತ್ತಿದ್ದರೆಂದೆನಿಸಿತು. ನನ್ನ

ಶತ್ರುಗಳು— ಹೀಗೆನ್ನುವ ಮೊದಲು ಕ್ಷಮಾಪಣೆ ಕೇಳಬೇಕಾಗಿದೆ—ನಾನು ನೆನಪಿಗೆ ತರುವುದೊಬ್ಬಳನ್ನೆ. ನಮ್ಮ ನೆರೆಯಲ್ಲಿದ್ದ ಒಬ್ಬ ಹುಡಿಗೆ—ನಾಲ್ಕು ಜನರಲ್ಲಿ ಕುಳಿತಾಗ ನಾನು ಆಕೆಯ ಮೋಜು ಮಾಡಿದ್ದೆ. ಆಕೆ ನನ್ನನ್ನು ಕಾಣುವುದನ್ನೆ ಬಿಟ್ಟುಬಿಟ್ಟಳು. ನನ್ನ ತಪ್ಪು ನಾನು ಒಪ್ಪಿಕೊಂಡು, ನನ್ನನ್ನಾಕೆ ಕ್ಷಮಿಸಬೇಕಾಗಿ ಪತ್ರ ಬರೆದೆ. ಆಕೆ ತಾನು ಕ್ಷಮಿಸಿದ್ದಲ್ಲದೆ ತಿರುಗಿ ನಾನು ತನ್ನನ್ನು ಕ್ಷಮಿಸಬೇಕಾಗಿ ಬರೆದಳು. ಆಕೆಯ ಆ ನೇರವಾದ ಶಬ್ದಗಳನ್ನೋದಿ ಹಿಗ್ಗಿ ಕಣ್ಣೀರು ಸುರಿಸಿದೆ—ಅವುಗಳಲ್ಲಿ ನನಗೆ ಆಳವಾದ ಭಾವನೆಯೆ ಕಂಡುಬಂದಿತು. ನನ್ನ ಮುದಿ ದಾದಿಯಂತೂ ನಾನು ಕ್ಷಮಾಪಣೆ ಕೇಳಿದಾಗ ಅತ್ತುಬಿಟ್ಟಳು ಎಲ್ಲರೂ ನನ್ನ ಬಗೆಗೆ ಇಷ್ಟು ಕರುಣೆಯುಳ್ಳವರಾಗುವ ಕಾರಣವೇನಿದ್ದೀತು? ಅವರ ಪ್ರೀತಿಗೆ ಅರ್ಹಳಾಗಬೇಕೆಂದು ನನ್ನಿಂದೇನಂಥ ಪುಣ್ಯ ಕೃತ್ಯವಾಗಿದ್ದೀತು? ನಾನು ನನ್ನನ್ನೆ ಕೇಳಿಕೊಂಡೆ. ಸರ್ಜಿ ಮಿಕ್ಯಾಲಿಚ್ನರು ನನ್ನ ನೆನಪಿಗೆ ಬಂದು ನಾನವರ ಬಗೆಗೆ ಎಷ್ಟೋ ಹೊತ್ತಿನವರೆಗೆ ವಿಚಾರ ಮಾಡಿದೆ. ಅವರ ವಿಚಾರ ಬಾರದೆ ಹೋಗಲಿಲ್ಲ—ಅದರಲ್ಲಿ ಪಾಪವೂ ಇದ್ದಂತೆನಿಸಲಿಲ್ಲ—ನಾನವರನ್ನು ಪ್ರೀತಿಸುತ್ತಿದ್ದೆನೆಂಬುದರ ಅರಿವು ಬಂದ ಆ ರಾತ್ರಿಗಿಂತ ಇಂದವರನ್ನು ಬೇರೆಯಾಗಿ ನೋಡುತ್ತಿದ್ದೆ. ಈಗವರು ನನ್ನ ಎರಡನೆಯ ಪ್ರಾಣ—ನನ್ನ ಮುಂದಿನ ಎಲ್ಲ ಯೋಜನೆಗಳಲ್ಲಿ ಮುಖ್ಯವಾದುದೊಂದು ಅಂಗವಾಗಿದ್ದರು. ಅವರೆದುರಿಗಿದ್ದಾಗ ನನ್ನಲ್ಲಿ ತೋರುವ ನ್ಯೂನತೆಗಳು ಮಾಯವಾಗಿದ್ದುವು—ನಾನೀಗ ಹೊಂದಿದ ನೈತಿಕ ಬಲದ ಮೂಲಕ ಅವರಿಗೆ ಸರಿಸಮಾನಳಾಗಿ ನಾನವರನ್ನರಿತುಕೊಳ್ಳಬಹುದೆಂದೆನಿಸಿತು ನನಗೆ. ಅದರಲ್ಲಿ ವಿಚಿತ್ರವೆಂದುಕೊಂಡದ್ದಿಲ್ಲ ಈಗ ಸ್ವಾಭಾವಿಕವೆಂದೆ ತೋರಿತು. ಎರಡನೆಯವರಿಗಾಗಿ ಉಳಿಯುವುದೆ ನಿಜವಾದ ಆನಂದ ಎಂದವರು ಹೇಳಿದ್ದರ ಅರ್ಥ ನನಗೀಗಾಯಿತು—ನಾನದನ್ನೊಪ್ಪಿಕೊಂಡೆ. ನಮ್ಮಿಬ್ಬರ ಜೀವಿತವೂ ಪೂರ್ಣ ಸುಖಿಯಾಗಿ ತಡೆಯಿಲ್ಲದೆ ಸಾಗುವುದೆಂದು ನನ್ನಲ್ಲಿ ವಿಶ್ವಾಸ ಹುಟ್ಟಿತು. ಪರದೇಶಗಳಲ್ಲಿ ಪ್ರವಾಸ, ಸಿರಿವಂತರ ಸಹವಾಸ, ತೋರಿಕೆ ಇವುಗಳನ್ನಾವನ್ನೂ ನಾನು ಎದುರು ನೋಡುತ್ತಿರಲಿಲ್ಲ. ನನ್ನ ಕಣ್ಣಿಗೆ ಕಟ್ಟಿದ ನೋಟವೆ ಬೇರೆ-ಹಳ್ಳಿಯಲ್ಲಿ ಶಾಂತ ಜೀವನ, ಸ್ವಾರ್ಥತ್ಯಾಗ, ಪರಸ್ಪರ ಪ್ರೇಮ, ಭಾಗ್ಯ ದೇವತೆಯು ಕೊಡಗೈಯಿಂದ ಕೊಟ್ಟದ್ದರ ಅರಿಕೆ.

ನನ್ನ ಹುಟ್ಟಿದ ದಿನ ದೀಕ್ಷೆ ತೆಗೆದುಕೊಳ್ಳುವ ಸಂಕಲ್ಪವನ್ನು ಪಾರು ಗಾಣಿಸಿದೆ. ಅಂದು ದೇವಾಲಯದಿಂದ ಬಂದಾಗ ನನ್ನ ಮನಸು ಸುಖ ವಿಚಾರಗಳಿಂದ ತುಂಬಿ ತುಳುಕುತ್ತಿತ್ತು. ನನಗೆ ಇರವಿನ ಅಂಜಿಕೆಯೂ ಯಿತು—ಆ ಸುಖದಲ್ಲಿ ತಡೆಯಾಗುವುದೊ ಏನೊ ಎಂದೂ ಅಂಜಿಕೆ ಹುಟ್ಟಿತು. ನಾವು ಗಾಡಿಯನ್ನಿಳಿದು ಮೆಟ್ಟಿಲು ಮುಟ್ಟಿದ್ದೇವು ಅಷ್ಟರಲ್ಲಿ ಪೂಲಿನ ಮೇಲೆ ಗಾಲಿಗಳ ಸಪ್ಪಳವಾಯಿತು. ಸರ್ಜ ಮಿಕ್ಯಾಲಿಚ್ಚರು ತಮ್ಮ ಒಳ್ಳೆಯ ಪರಿಚಿ ತವಿದ್ದ ಜಟಕಾ ಗಾಡಿಯಲ್ಲಿ ಕುಳಿತು ಬರುವುದನ್ನು ನೋಡಿದೆ. ಅವರು ನನ್ನನ್ನು ಅಭಿನಂದಿಸಿದರು—ನಾವಿಬ್ಬರೂ ನಡುಮನೆಗೆ ಹೋದೆವು. ನನಗವರ ಪರಿಚಯವಾದಂದಿನಿಂದ ನೋಡುತ್ತ ಬಂದಿದ್ದೆ, ಆ ಮುಂಜಾನೆ ನಿಃಸಂಕೋಚ ಳಿದ್ದಷ್ಟು ನನ್ನ ಮನಸ ಕಾಯ್ದುಕೊಂಡಿಟ್ಟಷ್ಟು ಎಂದೂ ಇರಲಿಲ್ಲ. ಅವರೆಡೆಗೆ ಮಾತನಾಡುವಾಗ ನಾನು ಸ್ವಲ್ಪವೂ ತೊಂದರೆಗೊಳ್ಳಲಿಲ್ಲ—ಅವರಿಗೆ ತಿಳಿಯ ವಾದ ಅವರ ಎಣಿಕೆಗೆ ಬಾರದೊಂದು ಹೊಸ ಜಗತ್ತಿನಲ್ಲಿ ನಾನು ನನ್ನನ್ನು ಕಂಡುಕೊಂಡೆ. ಈ ಭಾವನೆಗಳ ಕಾರಣವನ್ನವರರಿತಿರಬೇಕು. ಅವರು ವಾಡಿಕೆಯಗಿಂತ ಹೆಚ್ಚು ಮೃದುವಾಗಿ ನಡೆದುಕೊಂಡರು – ನನ್ನ ಬಗೆಗೆ ಆದರ ಭಾವವನ್ನು ತೋರಿದರು. ನಾನು ಪಿಯಾನೊದ ಹತ್ತಿರ ಹೋದಾಗ ಅವರದಕ್ಕೆ ಬೀಗ ಹಾಕಿ ಬೀಗದ ಕೈ ತಮ್ಮ ಜೇಬಿನಲ್ಲಿಟ್ಟುಕೊಂಡರು.

"ಈಗಿನ ನಿಮ್ಮ ಮನಸ್ಥಿತಿಯನ್ನು ಕದಲಿಸಬೇಡಿರಿ," ಅವರೆಂದರು; "ಈಗ ನಿಮ್ಮ ಆತ್ಮನಲ್ಲಿ ಶ್ರೇಷ್ಠವಾದ ಸಂಗೀತವೆ ನೆಲೆಸಿದೆ."

ಅವರ ಈ ಶಬ್ದಗಳಿಗಾಗಿ ಖುಣಿಯಾದೆ—ಆದರೂ ನನ್ನ ಮನದಲ್ಲಿ ಗೂಢವಾಗಿ ನೆಲೆಸಿದ ಭಾವಗಳು ಅವರಿಗಿಷ್ಟು ಸುಲಭವಾಗಿ ಇಷ್ಟು ಸ್ಪಷ್ಟ ವಾಗಿ ತಿಳಿದುದನ್ನು ಕಂಡು ನನಗೆ ಸರಿಯೆನಿಸಲಿಲ್ಲ. ಭೋಜನದ ಕಾಲಕೆ ಅವರು ತಾವು ಅಂದು ನನ್ನನ್ನು ಅಬಿನಂದಿಸಲು ಬಂದಂತೆ ಅಪ್ಪಣೆ ಪಡೆ ಯಲೂ ಬಂದಂತೆ ಹೇಳಿದರು—ಮರುದಿನ ಅವರು ಮಾಸ್ಕೊಕ್ಕೆ ಹೋಗು ವವರಿದ್ದರು. ಅದನ್ನು ಹೇಳುವಾಗ ಕಾತ್ಯಳೆಡೆಗೆ ನೋಡಿದರು. ಆದರೂ ನನ್ನೆಡೆಗೆ ಕದ್ದು ಒಂದು ನೋಟವನ್ನೆಸೆದರು. ನನ್ನ ಮೋರೆಯ ಮೇಲೆ ಏನಾ ದರೊಂದು ಭಾವವು ಹೊರದೋರುವುದೊ ಏನೊ ಎಂಬ ಅಂಜಿಕೆಯಾಗಿರ ಬೇಕು—ನಾನು ತಿಳಿದುಕೊಂಡೆ. ನಾನು ಬೆಚ್ಚಿಯೂ ಬೀಳಲಿಲ್ಲ, ತೊಂದರೆ

ಯನ್ನೂ ಪಡಲಿಲ್ಲ—ಅವರು ಬಹಳ ದಿವಸಗಳ ವರೆಗೆ ಹೋಗುವರೊ ಏನು ಎಂಬುದನ್ನು ಕೂಡ ವಿಚಾರಿಸಲಿಲ್ಲ. ಅವರು ಹಾಗೆ ಹೇಳಬಹುದೆಂದೂ ಗೊತ್ತಿತ್ತು ಅವರು ಹೋಗಲಿಕ್ಕಿಲ್ಲವೆಂಬುದೂ ಗೊತ್ತಿತ್ತು. ನನಗೆ ಹೇಗೆ ಗೊತ್ತಾಯಿತೆಂಬುದನ್ನು ನಾನು ಈಗ ನನಗೆ ಸಹ ತಿಳಿಸಿ ಹೇಳಲಾರೆ. ಆದರೆ ಆ ಮಹತ್ತ್ವದ ದಿನ ಆಗಿ ಹೋದದ್ದೇನು, ಮುಂದೆ ಆಗಬಹುದೇನು ಎಂಬುದು ನನಗೆ ಸುಸ್ಪಷ್ಟವಾಗಿ ಕಂಡಂತೆನಿಸಿತು. ಅದೊಂದು ಸವಿಗನಸು-ಆಗತಕ್ಕದ್ದೆಲ್ಲ ಆಗಿ ಹೋದಂತೆ ಪರಿಚಿತವಿದ್ದಂತೆ ಅನಿಸುವುದು-ಮತ್ತೆ ಆಗುವುದು—ಆಗುವುದೆಂಬುದು ಸುಸ್ಪಷ್ಟವಾಗಿ ತಿಳಿಯುವುದು.

ಭೋಜನವಾದ ಕೂಡಲೆ ಅವರು ಹೋಗಬೇಕೆಂದಿದ್ದರು. ಕಾಟ್ಯಾ ದೇವಾಲಯದಿಂದ ಬಂದ ಮೇಲೆ ದಣಿದಿದ್ದರಿಂದ ತುಸು ಒರಗಿದ್ದಳು—ಆಕೆಯ ಅಪ್ಪಣೆ ಪಡೆದುಕೊಂಡು ಹೋಗಬೇಕೆಂದರೆ ಅವರಿಗೆ ಆಕೆ ಎಚ್ಚರಾಗುವ ವರೆಗೆ ದಾರಿ ಕಾಯಬೇಕಾಯಿತು. ದಿವಾಣಖಾನೆಯಲ್ಲಿ ಬಿಸಿಲು ಕಾಯತೊಡಗಿತು. ನಾವು ವ್ಹರಾಂಡಕ್ಕೆ ಹೋದೆವು. ಅಲ್ಲಿ ನಾವು ಕುಳಿತುಕೊಂಡಾಗ ನಾನು ಶಾಂತವಾಗಿ ನನ್ನ ಅಭಿಲಾಷೆಯ ದೈವ ಪರೀಕ್ಷೆಯೆಂತಿದ್ದ ವಿಷಯವನ್ನು ಪ್ರಾರಂಭಿಸಿದೆ. ನಾವು ಕುಳಿತುಕೊಂಡ ತತ್‌ಕ್ಷಣ, ಮೊದಲೂ ಅಲ್ಲ, ಹಿಂದುಗಡೆಯೂ ಅಲ್ಲ, ನಾನು ಮಾತಿಗೆ ಮೊದಲ ಮಾಡಿದ—ನನ್ನ ಇಷ್ಟಾರ್ಥವನ್ನು ಸ್ಪಷ್ಟವಾಗಿ ಹೇಳಲಿಕ್ಕೆ ತಡೆಯಾಗದಂತೆ ಮಾತಿನ ಓಘ ವಿನ್ನಾವಕಡೆಗೆ ಹೋಗಬಾರದೆಂದೆನ್ನಿರಿ, ಅಥವಾ ಮಾತಿನ ಹೊಳಪು ಬೇರೆಯಾಗಬಾರದೆಂದೆನ್ನಿರಿ ಹಾಗೆ ಮಾಡಿದೆ. ನನ್ನಲ್ಲಿ ಆ ಶಾಂತತೆ, ನಿಶ್ಚಯ, ಮಾತಿನಲ್ಲಿ ಅಚ್ಚುಕಟ್ಟುತನ ಹೇಗೆ ಬಂದಿತೆಂಬುದನ್ನು ನಾನರಿಯೆ ಯಾವುದೊ ಒಂದು ಸ್ವತಂತ್ರ ವ್ಯಕ್ತಿಯು ನನ್ನ ಮುಖಾಂತರ ಮಾತನಾಡುತ್ತಿದ್ದಿರಬೇಕು. ವ್ಹರಾಂಡದ ತುದಿಗೆ ಕಟಾಂಜನದ ಮೇಲೆ ಮೊಳಕೈಯೂರಿ ಅವರು ಕುಳಿತಿದ್ದರು—ಒಂದು ಲಿಲ್ಯಕ್‌ದ ಟೊಂಗಿಯನ್ನು ತಮ್ಮೆಡೆಗೆಳೆದು ಅದರ ಎಲೆಗಳನ್ನು ತರೆದರು. ನಾನು ಮಾತಿಗೆ ಪ್ರಾರಂಭಿಸಿದ ಕೂಡಲೆ ಟೊಂಗಿಯನ್ನು ಬಿಟ್ಟು ತಮ್ಮ ಕತ್ತನ್ನು ಒಂದು ಕೈಮೇಲೂರಿ ಕುಳಿತುಕೊಂಡರು. ಅವರ ವೃತ್ತಿಯು ಮೇಲಿಂದ ನಿಶ್ಚಲರಾಗಿದ್ದರೆಂದೂ ತೋರುತ್ತಿತ್ತು—ಇಲ್ಲವೆ ಭಾವನೆಯ ಅತಿರೇಕ.

“ನೀವೀಗ ಹೋಗುವುದೇಕೆ?” ನಾನವರೆಡೆಗೆ ನೇರವಾಗಿ ನೋಡುತ್ತ ಅರ್ಥ ಪೂರ್ಣವಾಗಿಯೂ ನಿಶ್ಚಯ ಸ್ವರದಿಂದಲೂ ಕೇಳಿದೆ.

ಅವರು ಒಮ್ಮೆಲೆ ಉತ್ತರ ಕೊಡಲಿಲ್ಲ.

“ಕೆಲಸ.” ಅವರು ಪುಟಪುಟಿಸಿದರು—ತಮ್ಮ ಕಣ್ಣು ತಗ್ಗಿಸಿದರು.

ನನ್ನ ನೇರವಾದ ಪ್ರಶ್ನೆಗೆ ಉತ್ತರವಾಗಿ ಸುಳ್ಳೇನಾಂದರೊಂದು ಹೇಳುವುದು ಅವರಿಗೆಷ್ಟು ಪ್ರಯಾಸದ್ದಾಗಿರಬಹುದೆಂಬುದನ್ನು ನಾನು ತಿಳಿದುಕೊಂಡೆ.

“ಇಲ್ಲಿ ಕೇಳಿರಿ” ನಾನೆಂದೆ; “ಇವೊತ್ತಿನ ದಿನ ನನಗೆಷ್ಟು ಮಹತ್ತ್ವದ್ದಿದೆ ಎಂಬುದು ನಿಮಗೆ ಗೊತ್ತಿದೆ. ಎಷ್ಟೋ ಕಾರಣಗಳಿಂದ ಅತ್ಯಂತ ಮಹತ್ತ್ವದ್ದಾಗಿದೆ. ನಾನೇನಾದರೂ ನಿಮ್ಮನ್ನು ವಿಚಾರಿಸುವುದು ನಿಮ್ಮ ಬಗೆಗೆ ಅಲ್ಲದ ಪಂಚಾಯತಿ ಮಾಡುವುದಕ್ಕಾಗಿ ಅಲ್ಲ, (ನಾನು ನಿಮ್ಮನ್ನು ಚನ್ನಾಗಿ ಅರಿತಿರುವೆನು—ಪ್ರೀತಿಸುವೆನು) ನಾನೀಗ ಕೇಳುವುದು ನನಗೆ ನಿಜವಾದ ಉತ್ತರ ಬೇಕೆಂದು. ನೀವು ಹೋಗುವುದೇಕೆ?”

“ನಿಜವಾದ ಕಾರಣವನ್ನು ಹೇಳುವುದು ಅದೆಷ್ಟು ಕಠಿನವಿರುವದು,” ಅವರೆಂದರು; “ಈ ಇಡಿ ವಾರ ನಾನು ನಿಮ್ಮ ಬಗೆಗೆ ಮತ್ತು ನನ್ನ ಬಗೆಗೆ ಬಹಳ ವಿಚಾರ ಮಾಡಿರುವೆನು—ನಾನು ಹೋಗಲೇ ಬೇಕೆಂದು ನಿಶ್ಚಯಿಸಿರುವೆನು. ಏಕಿರಬೇಕೆಂಬುದು ನಿಮಗೆ ಗೊತ್ತಿದೆ. ನನ್ನ ಬಗೆಗೇನಾದರೊಂದು ಒಲುವೆಂಬುದಿದ್ದರೆ ನೀವು ಯಾವ ಪ್ರಶ್ನೆಯನ್ನೂ ಮಾಡಲಾರಿರಿ.” ಅವರು ತಮ್ಮ ಹಣೆಯ ಮೇಲೆ ಕೈಯಾಡಿಸಿ ಕಣ್ಣುಗಳನ್ನು ಮುಚ್ಚಿಕೊಂಡರು. “ಎಷ್ಟು ಕಠಿನ........ನಿಮಗೆ ಗೊತ್ತಾಗುವುದು.”

ನನ್ನ ಸೆ ಹಾರಲಾರಂಭಿಸಿತು.

“ನನಗೆ ತಿಳಿಯದು ನಿಮ್ಮ ಮಾತಿನರ್ಥ.” ನನಗೆ ತಿಳಿಯದು—ನೀವೆ ಹೇಳಬೇಕು. ದೇವರನ್ನು ಸ್ಮರಿಸಿ, ಈ ದಿನವನ್ನು ಸ್ಮರಿಸಿ ನೀವು ಬೇಕಾದ್ದನ್ನು ಹೇಳಬಹುದು. ನಾನು ಶಾಂತ ಚಿತ್ತದಿಂದ ಕೇಳುವೆನು.” ನಾನೆಂದೆ.

ಅವರು ತಾವು ಕುಳಿತಲ್ಲಿ ಸ್ವಲ್ಪ ಕದಲಿ ನನ್ನೆಡೆಗೆ ನೋಡಿದರು—ಲಿಲ್ಯಾಕ್‌ದ ಟೊಂಗಿಯನ್ನು ಮತ್ತೆ ತಮ್ಮೆಡೆಗೆ ಸೆಳೆದುಕೊಂಡರು.

"ಒಳ್ಳೆಯದು ಹಾಗಾದರೆ!" ಅವರು ಸ್ವಲ್ಪ ತಡೆದು ತಮ್ಮ ಭಾವನೆಗಳನ್ನು ಸ್ಥಿರಪಡಿಸಲೋಸುಗ ವ್ಯರ್ಥವಾಗಿ ಧಡಪಡಿಸಿದಂತಿತ್ತು, ಅವರೆಂದರು, "ಅದೊಂದು ಹುಚ್ಚ ವಿಚಾರ—ಹೇಗೆ ಹೇಳಬೇಕೆಂಬುದನ್ನರಿಯೆ—ಅದೆಷ್ಟು ಕಠಿನವಿದೆ ಎಂಬುದು ನನಗೆ ಗೊತ್ತಿದೆ—ಆದರೂ ನಿಮಗೆ ತಿಳಿಸಿ ಹೇಳುವದಕ್ಕೆ ಪ್ರಯತ್ನಪಡುವೆನು." ಅವರು ಮತ್ತೆಂದರು—ಅವರ ಮೋರೆಯಮೇಲೆ ನೋವಿನ ಕಳೆಯಿತ್ತು.

"ಅದೇನು ?" ನಾನೆಂದೆ.

"ಒಬ್ಬ ಮನುಷ್ಯನಿದ್ದಾನೆಂದು ಕಲ್ಪಿಸೋಣ—ಆತನನ್ನು ಅ ಎಂದು ಕರಿಯೋಣ—ಹರೆಯುತನದಿಂದಗಲಿ ಎಷ್ಟೋ ವರ್ಷಗಳಾಗಿವೆ ಆತನಿಗೆ—ಮತ್ತು ಒಬ್ಬ ಹೆಂಗಸು—ಆಕೆಯನ್ನು ಬ ಎಂದು ಕರೆಯೋಣ—ಆಕೆ ಎಳೆ ವಯಸಿನವಳು—ಆನಂದ ವೃತ್ತಿಯವಳು—ಆಯುಷ್ಯದಲ್ಲಿ ಯಾವ ಬಗೆಯ ಅನುಭವವಿಲ್ಲ ಆಕೆಗೆ—ಜಗತ್ತನ್ನು ನೋಡಿಲ್ಲ. ಮನೆತನದ ತೊಡಕು ತೊಂದರೆಗಳ ಮೂಲಕ ಒಬ್ಬರ ಹತ್ತಿರ ಒಬ್ಬರು ಬಂದರು–ಆತನು ಆಕೆಯನ್ನು ತನ್ನ ಮಗಳಂತೆ ಭಾವಿಸಿ ಪ್ರೀತಿಸುತ್ತಿದ್ದನು—ಆ ಭಾವನೆಯಲ್ಲಿ ಕದಲು ಬದಲಾಗುವ ಭೀತಿ ಆತನಿಗಿರಲಿಲ್ಲ."

ಅವರು ಸುಮ್ಮನಾದರು—ನಾನವರನ್ನು ತಡೆಯಲಿಲ್ಲ.

"ಆದರೆ ಬ ಎಳೆ ವಯಸಿನವಳು–ಆಯುಷ್ಯವೆಂಬುದು ಆಕೆಗೆ ವಸಂತ ಕಾಲವೆ ಸರಿ ಎಂಬುದನ್ನು ಮರೆತೆನು." ನನ್ನೆಡೆಗೆ ನೋಡದೆ ಒಂದು ನಿಶ್ಚಯ ಮಾಡಿಕೊಂಡು ಅವರು ಭರದಿಂದ ಸಾಗಿದರು. "ಆಕೆಯನ್ನು ಬೇರೆ ಭಾವನೆಯಿಂದ ಪ್ರೀತಿಸುವುದು ಸುಲಭ—ಆಕೆಗದು ಮೋಜಾಗಬಹುದೆಂಬುದನ್ನೂ ಮರೆತೆನು. ಆತನು ತಪ್ಪು ತಿಳಿವಳಿಕೆ ಮಾಡಿಕೊಂಡನು. ಆದರೆ ಮರುಕ್ಷಣವೆ ಎರಡನೆಯದೊಂದು ಭಾವನೆ—ಅನುತಾಪದಷ್ಟೆ ತೀವ್ರವಾದುದು–ಆತನೆದೆಯಲ್ಲಿ ಮನೆಮಾಡಿತು—ಆತನು ಭಯಗೊಂಡನು. ಅವರೀರ್ವರಲ್ಲಿದ್ದ ಸ್ನೇಹ ಭಾವವಳಿದು ಹೋಗುವುದೊ ಏನೊ ಎಂದು ಆತನು ಭಯಗೊಂಡನು—ಆ ಪ್ರಸಂಗ ಬರುವ ಮೊದಲೆ ಹೊರಟು ಹೋಗಬೇಕೆಂದು ಆತನೆಣಿಸಿದನು." ಹೀಗೆ ಹೇಳುವಾಗ ಅವರು ತಮ್ಮ ಕಣ್ಣುಗಳನ್ನು ತಿಕ್ಕಿ ತಿಕ್ಕಿ ಮುಚ್ಚಿದರು. ತಮ್ಮ ವಿರಕ್ತ ಭಾವವನ್ನು ತೋರಿಸುವುದಕ್ಕೊ ಏನೊ.

"ಬೇರೆ ಭಾವನೆಯಿಂದ ಆಕೆಯನ್ನು ಪ್ರೀತಿಸಲಿಕ್ಕೆ ಆತನೇಕಂಜಿದನು ?" ನಾನು ಮೆಲ್ಲನಿಯಿಂದ ಕೇಳಿದೆ; ನನ್ನ ಭಾವನೆಗಳನ್ನೆಲ್ಲ ಬಿಗಿ ಹಿಡಿದಿದ್ದೆ—ನನ್ನ ದನಿ ಸಮಧಾತವಾಗಿತ್ತು. ನಾನು ಮಾತನಾಡುವುದರಲ್ಲಿ ನಿಜಾಂಶವಿದ್ದೀತೆಂದು ಅವರು ತಿಳಿದಿರಲಿಲ್ಲ—ಅವರು ನೊಂದುಕೊಂಡಂತಿತ್ತು.

"ನೀವು ಎಳೆ ವಯಸಿನವರು, ನಾನು ಎಳೆವಯಸಿನವನಲ್ಲ. ನಿಮಗೆ ಆಮೋದ ಪ್ರಮೋದಗಳು ಬೇಕು—ನನಗೊ ಏನಾದರೂ ಗಂಭೀರವಾದ ವಿಷಯ ಬೇಕು. ಆನಂದದಲ್ಲಿ ಕಾಲ ಕಳೆಯುವದಿದೆ ನಿಮಗೆ—ಅದು ನನ್ನ ಜೊತೆಗಲ್ಲ—ನಿಮ್ಮ ಆಯುಷ್ಯ ನನ್ನ ಜೊತೆಗೆ ಕೂಡಿದರೆ ನಾನು ಎಲ್ಲವನ್ನು ನಿಜವೆಂದು ಹಿಡಿಯುವೆನು—ಆವೇಳೆ ನಾನು ದುಃಖಪಡಬಹುದು, ನಿಮಗೆ ಅನುತಾಪವಾಗಬಹುದು. ಅದನ್ನೇ ಆನು ಹೇಳಿದ್ದು," ಅವರು ಮತ್ತೆ ನುಡಿದರು; "ಆದರೂ ಇದೆಲ್ಲ ಪೋಕರಿ ಮಾತು— ಈಗ ನಿಮಗೆ ತಿಳಿಯುವುದು ನಾನೇಕೆ ಹೋಗುವೆನೆಂಬುದು. ಈ ಮಾತು ಸಾಕು. ಕ್ಷಮಿಸಿರಿ."

"ಅದೇನಿಲ್ಲ," ನಾನೆಂದೆ, "ಈ ಮಾತನ್ನೆ ಮುಂದೆ ಸಾಗಿಸೋಣ." ನನ್ನ ದನಿಯಲ್ಲಿ ಕಣ್ಣೀರು ತುಳುಕುತ್ತಿತ್ತು. "ಆತನು ಆಕೆಯನ್ನು ಪ್ರೀತಿಸುತ್ತಿದ್ದನೊ ಇಲ್ಲವೊ ?"

ಅವರು ಉತ್ತರ ಕೊಡಲಿಲ್ಲ.

"ಆತನು ಆಕೆಯನ್ನು ಪ್ರೀತಿಸುತ್ತಿದ್ದಿಲ್ಲವಾದರೆ ಆಕೆಯನ್ನು ಒಂದು ಮಗುವೆಂದು ಭಾವಿಸಿ ಇಲ್ಲದ ಸೋಗು ಮಾಡಿದನೇಕೆ ?" ನಾನು ಕೇಳಿದೆ.

"ಅಹುದು—ಆತನು ಅನುಚಿತವಾಗಿ ವರ್ತಿಸಿದನು," ಅವರು ನನ್ನನ್ನು ತಡೆದರು; "ಅಂತೂ ಎಲ್ಲವೂ ಮುಕ್ತಾಮ ಹೊಂದಿ ಅವರಿಬ್ಬರೂ ಸ್ನೇಹಿತರಾಗಿ ಉಳಿದು ಬೇರೆ ಬೇರೆ ದಾರಿ ಕಂಡರು."

"ಅಯ್ಯೊ ಪಾಪ! ಇದಕ್ಕೆ ಇನ್ನಾವ ಮುಗಿತಾಯವಿರಲಿಕ್ಕಿಲ್ಲವೆ ?" ನಾನು ಪ್ರಯಾಸದಿಂದೆಂದೆ—ನಾನೇನೆಂಬುದಕ್ಕೆ ಭೀತಿಗೊಂಡೆ.

"ಇದೆ." ಅವರೆಂದರು—ಅವರ ಮೋರೆ ಭಾವ ವಶವಾಗಿತ್ತು—ಅವರು ನನ್ನೆಡೆಗೆ ನೇರವಾಗಿ ನೋಡಿದರು. "ಎರಡು ಮುಗಿತಾಯಗಳಾಗಬಹುದು.

ದಯೆವಿಟ್ಟು ನಾನು ಹೇಳುವುದನ್ನು ಶಾಂತವಾಗಿ ಕೇಳಿರಿ—ನನ್ನನ್ನು ತಡೆದು ನಿಲ್ಲಿಸಬೇಡಿರಿ. ಕೆಲವರು ಹೇಳುವುದುಂಟು, " ಅವರು ಎದ್ದು ನಿಂತು ನಸು ನಕ್ಕರು—ಆ ನಗೆಯಲ್ಲಿ ನೋವು ಮೂಡಿತ್ತು. " ಕೆಲವರು ಹೇಳುವುದುಂಟು ಆ ನಿಗೆ ಹುಚ್ಚು ಹಿಡಿಯಿತು—ಆತನು ಬ ಳ ಪ್ರೀತಿಯಲ್ಲಿ ಸಿಲುಕಿದ—ಹಾಗೆ ಆಕೆಗೆ ಹೇಳಿದ. ಆಕೆ ನಕ್ಕು, ಬಿಟ್ಟಳು. ಆಕೆಗದೊಂದು ವಿನೋದ—ಆತ ನಿಗೂ, ಅದೊಂದು ಇರವು ಸಾವಿನ ಸಮಸ್ಯೆ. "

ನಾನು ತತ್ತರಿಸಿದೆ—ಅವರನ್ನು ತಡೆದು ನಿಲ್ಲಿಸಬೇಕೆಂದೆ—ನನ್ನ ಬಗೆಗೆ ಮಾತನಾಡಲಧಿಕಾರವಿಲ್ಲವೆಂದು ಹೇಳಲೆಸಗಿದೆ—ಅವರು ನನ್ನನ್ನು ತಟ್ಟಿ ತಮ್ಮ ಕೈ ನನ್ನ ಮೇಲಿಟ್ಟರು.

" ತಡೆಯಿರಿ. " ಅವರೆಂದರು—ಅವರ ದನಿ ನಡುಗಿತು, " ಬೇರೆ ಕತೆಯೂ ಇದೆ—ಆಕೆ ಆತನ ಬಗೆಗೆ ಕನಿಕರಪಟ್ಟಳು—ಮತ್ತು—ಪಾಪ! ಜಗತ್ತಿನ ಅಜ್ಞಾನ!—ಆತನನ್ನು ಪ್ರೀತಿಸಬಹುದೆಂದು ಭಾವಿಸಿ ಮದುವೆಯಾ ಗಲು ಒಪ್ಪಿಕೊಂಡಳು—ಆತ—ಹುಚ್ಚ!—ಅದನ್ನು ನಂಬಿದ—ತನ್ನ ಆಯು ಷ್ಯಕ್ಕೆ ಮತ್ತೆ ಮೊದಲಾಗುವುದೆಂದು ನಂಬಿದ–ಆಕೆ ತಾನು ಆತನನ್ನು ಮೋಸ ಮಾಡಿದ್ದನ್ನು ಅರಿತುಕೊಂಡಳು—ಆತನು ತನ್ನನ್ನು ಮೋಸ ಮಾಡಿದ್ದನ್ನು ಅರಿತುಕೊಂಡಳು-ಆಯಿತು. ಈ ವಿಷಯವನ್ನೆ ಬಿಟ್ಟು ಬಿಡೋಣವಲ್ಲ. " ಏನು ಮಾತನಾಡಬೇಕೆಂಬುದು ತಿಳಿಯಿದೆ ಅವರು ಮುಗಿಸಿದರು. ಆಮೇಲ ವರು ನನ್ನೆದುರಿಗೆ ಇತ್ತಿಂದತ್ತ ಅತ್ತಿಂದಿತ್ತ ಓಡಾಡತೊಡಗಿದರು.

ಅವರು ಆ ವಿಷಯವನ್ನು ಬಿಟ್ಟು ಬಿಡಬೇಕೆಂದಾಗ್ಯೂ ಅವರ ಅಂತಃ ಕರಣದ ಸಾರಸರ್ವಸ್ವವು ನನ್ನ ಉತ್ತರವನ್ನು ಎದುರು ನೋಡುತ್ತಿತ್ತು. ನಾನು ಮಾತನಾಡಬೇಕೆಂದೆ-ನನ್ನ ಎದೆಯಲ್ಲಿಯ ನೋವು ನನ್ನನ್ನು ಮಂಕು ಮಾಡಿತು. ನಾನವರೆಡೆಗೆ ನೋಡಿದೆ—ಅವರ ಮೋರೆ ಇಳಿದಿತು—ಕೆಳದುಟಿ ನಡುಗುತ್ತಿತ್ತು—ನಾನದನ್ನು ಕಂಡು ನೊಂದುಕೊಂಡೆ. ಒಳ್ಳೆಯ ಪ್ರಯಾ ಸದಿಂದ ನನ್ನನ್ನು ಕಟ್ಟಿಹಾಕಿದ ಮೂಕತನದ ಇಕ್ಕಟ್ಟನ್ನು ಬಿಸುಟಿದೆ-ಮೆಲ್ಲ ಸಿಯಿಂದ ಮಾತನಾಡತೊಡಗಿದೆ—ಯಾವಾಗ ಆ ದನಿ ಕುಗ್ಗುವುದೊ ಎಂದು ಭೀತಿಗೊಂಡೆ.

" ಆ ಕತೆಗೆ ಮೂರನೆಯದೊಂದು ಮುಗಿತಾಯವಿದೆ, " ನಾನೆಂದೆ—ಅವರು ಮಾತನಾಡಲಿಲ್ಲ "—ಮೂರನೆಯ ಮುಗಿತಾಯವೆಂದರೆ ಆತನು ಆಕೆಯನ್ನು ಪ್ರೀತಿಸುತ್ತಿರಲಿಲ್ಲ—ದುಃಖಪಡಿಸುತ್ತಿದ್ದನು ದುಃಖ—ತಾನು ಮಾಡುವುದೆ ಒಳ್ಳೆಯದೆಂದು ತಿಳಿದಿದ್ದನು—ಆಕೆಯನ್ನು ಬಿಟ್ಟು ಬಿಟ್ಟನು—ಅದರಲ್ಲಿ ದೊಡ್ಡಿಸ್ತಿಕೆ ತಿಳಿದುಕೊಂಡನು. ನೀವೆ ಸೋಗು ಮಾಡುತ್ತಿರುವಿರಿ, ನಾನಲ್ಲ. ನಾವು ಮೊದಲ ದಿನ ಭೆಟ್ಟಿಯಾದವಂದಿನಿಂದ ನಾನು ನಿಮ್ಮನ್ನು ಪ್ರೀತಿಸುತ್ತ ಬಂದಿದ್ದೇನೆ. " ನಾನು ಮತ್ತೆ ಮತ್ತೆ ನುಡಿದೆ—" ಪ್ರೀತಿಸುತ್ತ ಬಂದಿದ್ದೇನೆ " ಎಂದು ಹೇಳುವಾಗ ಅರಿಯದೆ ದನಿ ಬದಲಾಯಿತು—ಕಿರಿಚಿಕೊಂಡಂತಾಯಿತು—ನನಗೇ ಭೀತಿಯಾಯಿತು.

ಅವರು ಮೋರೆಯಿಳಿಸಿಕೊಂಡು ನನ್ನೆದುರಿಗೆ ನಿಂತರು—ಅವರ ತುಟಿಗಳು ಹೆಚ್ಚೆಚ್ಚಾಗಿ ನಡುಗತೊಡಗಿದುವು—ಕಂಬನಿಯ ಎರಡು ತೊಟ್ಟುಗಳು ಗಲ್ಲಕ್ಕಿಳಿದುವು

" ಇದು ಸರಿಯಲ್ಲ. " ನಾನು ಕಿರಿಚಿಕೊಂಡೆ-ಸುರಿಯದಾದ ರೊಚ್ಚಿನ ಕಂಬನಿಗಳಿಂದ ಕುತ್ತಿಗೆ ಬಿಗಿದು ಬಂದಂತೆನಿಸಿತು. " ನೀವು ಹೀಗೇಕೆ ಮಾಡುವಿರಿ ? " ನಾನು ಕಿರಿಚಿದೆ—ಅಲ್ಲಿಂದ ಹೊರಟು ಹೋಗಲೆದ್ದೆ.

ಅವರು ನನ್ನನ್ನು ಹೋಗಗೊಡಲಿಲ್ಲ. ಅವರ ತಲೆ ನನ್ನ ಮೊಳಕಾಲಿಗೊರಗಿತ್ತು—ಅವರ ತುಟಿಗಳು ನನ್ನ ನಡುಗುವ ಕೈಗಳನ್ನು ಮುತ್ತಿಡುತ್ತಿದ್ದುವು—ಅವುಗಳ ಮೇಲೆ ಕಂಬನಿಯ ಧಾರೆ ನಡೆದಿತ್ತು. " ದೇವರೆ! ನನಗೆ ಗೊತ್ತಾಗಿದ್ದರೆ ತಾನೆ—" ಎಂದವರುಸಿರಿದರು.

" ಅದೇನು ? ಅದೇನು ? " ನಾನು ನುಡಿಯುತ್ತಲಿದ್ದೆ. ನನ್ನೆದೆಯಲ್ಲಿ ಆಗ ಸುಖ ನೆಲೆಸಿತ್ತು—ಎಂದೂ ಮರಳಿ ಬಾರದಂತೆ ಕೈ ಬಿಟ್ಟು ಹೋದಂತಿದ್ದ ಸುಖ ಮರಳಿ ಬಂದಿತ್ತೀಗ.

ಐದು ನಿಮಿಷಗಳ ನಂತರ ಸೋನ್ಯಾ ಮೇಲುಪ್ಪರಿಗೆಗೆ ಕಾಟ್ಯಳೆಡೆಗೆ ಓಡಿದಳು ಮಾಷಾ ಸರ್ಜಿ ಮಿಕ್ಕಾಲಿಚ್ಚರನ್ನು ಮದುವೆಯಾಗುವಳೆಂದು ಮನೆ ತುಂಬ ಸಾರುತ್ತ.

# ಪರಿಚ್ಛೇದ ೫

ನಮ್ಮ ಮದುವೆಯನ್ನು ಮುಂದೆ ಹಾಕಲು ಕಾರಣಗಳೇನೂ ಇರಲಿಲ್ಲ- ನಾನಾಯಿತು ಅವರಾಯಿತು ತಡೆಯಬೇಕೆನ್ನಲಿಲ್ಲ. ಕಾಟ್ಯೆಳು ಮಾತ್ರ ನಾವು ಮಾಸ್ಕೊಕ್ಕೆ ಹೋಗಬೇಕೆಂದಳು ಮದುವೆಯ ಉಡುಪುಗಳನ್ನು ಕೊಳ್ಳಲಿಕ್ಕೆ; ಅವರ ತಾಯಿಯ ಆಗ್ರಹವಿತ್ತು ಮದುವೆಯ ಮೊದಲು ಅವರು ಹೊಸ ಗಾಡಿ ಯನ್ನು ಕೊಳ್ಳಬೇಕು. ಮನೆ ಸಿಂಗರಿಸಬೇಕು ಹೊಸ ಸಾಮಾನು ಕೊಳ್ಳ ಬೇಕೆಂದು ನಾವು ನಮ್ಮ ಹಟವನ್ನೆ ಸಾಧಿಸಿದೆವು—ಇವೆಲ್ಲ ಇಷ್ಟು ಆವಶ್ಯ ಕವೆ ಆಗಿದ್ದರೆ ಆಮೇಲೆ ಮಾಡಲಿಕ್ಕೆ ಬಂದೀತು—ಈಗ ಮದುವೆ ನನ್ನ ಹುಟ್ಟಿದ ದಿನವಾದ ಹದಿನೈದು ದಿನಗಳೊಳಗೆ ಗದ್ದಲವಿಲ್ಲದೆ. ಹೊಸ ಉಡುಪು ತೊಡಪುಗಳಿಲ್ಲದೆ, ಊಟ ಪ್ರಯೋಜನಗಳಿಲ್ಲದೆ, ಮೈದುನನಿಲ್ಲದೆ. ಮದ್ಯಾರ್ಕ ವಿಲ್ಲದೆ—ಸ್ವಲ್ಪದರಲ್ಲಿ ಹೇಳಬೇಕೆಂದರೆ ರೂಢಿಯ ಯಾವ ವಿಧಾನವನ್ನೂ ಲೆಕ್ಕಿಸದೆ ಆಗಬೇಕೆಂದೆವು. ಬೆಂಡ ಜಯಂತ್ರಿಗಳಿಲ್ಲ, ಸಾಮಾನುಸಟ್ಟೆಲ್ಲ— ಮನೆ ಸಿಂಗರಿಸುವದಿಲ್ಲ - ಆಕೆಯ ಮದುವೆಗೆ ೩೦,೦೦೦ ರೂಬಲ್ಲುಗಳು ವೆಚ್ಚ ವಾಗಿದ್ದುವು—ಅದೀಗಾಗತಕ್ಕದ್ದಿರಲಿಲ್ಲ—ಆಕೆ ತಮ್ಮ ಕೆಲಸಗಿತ್ತಿಯೊಂದಿಗೆ ಕೋಠೀ ಕೋಣೆಯಲ್ಲಿ ನಡೆಸಿದ ವಿಚಾರವಿನಿಮಯದ ಬಗೆಗೆ ಅವರು ಹೇಳಿ ದರು—ನಮ್ಮ ಸುಖಕ್ಕೆ ಹಾಸುವುದೂ ಹೊಚ್ಚುವುದೂ, ಪರದೆಗಳೂ, ಒಂದೆ, ಸಾವಿರ ಜೀನಸುಗಳು ಬೇಕಿದ್ದವಂತೆ. ಇತ್ತ ನಮ್ಮ ಮನೆಯಲ್ಲಿ ಕಾಟ್ಯಾ ನಮ್ಮ ಮುದಿ ದಾದಿ ಕುಝುಮಿನೀಶ್ನಳೊಡನೆ ಚರ್ಚೆ ನಡೆಸಿದಳು. ಕಾಟ್ಯೆಳ ದೃಷ್ಟಿಯಲ್ಲಿ ಯಾವುದನ್ನೂ ನಿರರ್ಥಕವೆಂದು ಬಿಡುವಂತಿರಲಿಲ್ಲ. ಆಕೆಯ ಮನಸಿನಲ್ಲಿ ಹೊಕ್ಕಿದೇನೆಂದರೆ ನಾನೂ ಅವರೂ ನಮ್ಮ ಬವಿಷ್ಯತ್ತನ್ನು ಕುರಿತು ಮಾತನಾಡುವಾಗ ಅರ್ಥಶೂನ್ಯವಾದ ಪ್ರೇಮ, ಭಾವನೆ ಮುಂತಾದವುಗಳನ್ನೆ ಚರ್ಚಿಸಿರಬೇಕು; ನಿಜವಾಗಿಯೂ ಸುಖಿಯಾಗಬೇಕಿದ್ದರೆ ಉಡುಪು ತೊಡಪು ಗಳ ಪ್ರಮಾಣ, ಮನೆಯಲ್ಲಿ ಹಾಸುಗೆ ಹುಪ್ಪಡಿಗಳ ಅಚ್ಚುಳತೆ ಉದ್ದಳತೆ ಸರಿ ಯೂಗಿರಬೇಕು. ದಿನಕ್ಕೆ ಹತ್ತು ಸಲ ಎರಡೂ ಮನೆಗಳ ನಡುವೆ ಗುಪ್ತಾ ಲೋಚನೆಗಳು ನಡೆಯುತ್ತಿದ್ದುವು—ಅಲ್ಲಲ್ಲಿ ಏನೇನು ನಡೆದಿದೆ ಎಂಬುದರ ಬಗೆಗೆ; ಕಾಟ್ಯಾ ಮತ್ತು ಅವರ ತಾಯಿ ಇವರಿಬ್ಬರಲ್ಲಿ ಹಿತವಾದ ಬಳಕೆಯ

ಸಂಬಂಧವಿದ್ದರೂ ಅವರ ಕಾರ್ಯ ಕಲಾಪಗಳು ಒಳ್ಳೆಯ ಮುತ್ಸದ್ದಿತನದಿಂದ ಎದುರು ದಾರಿಯಲ್ಲಿ ಸಾಗಿದ್ದುವು. ಸರ್ಜಿ ಮಿಕ್ಕಾಲಿಕ್ಸರ ತಾಯಿ ಟಾಟ್ಯಾನಾ ಸಿಮ್ಯನೊವ್ನನಳೊಡನೆ ಒಳ್ಳೆಯ ಸಲಿಗೆಯ ಪರಿಚಯವಾಯಿತು—ಆಕೆ ಹಳೆ ತರದ ಹೆಣ್ಣುಮಗಳು—ಮನೆತನ ಸಾಗಿಸುವುದರಲ್ಲಿ ಶಿಸ್ತು, ರೀತಿ ಆಕೆಗೆ ಬೇಕಾದವುಗಳು. ಆಕೆಯ ಮಗ—ಆಕೆಯನ್ನು ಕೇವಲ ತಾಯಿಯೆಂದು ಪ್ರೀತಿಸುತ್ತಿರಲಿಲ್ಲ—ಆಕೆಗೆ ಸರಿಯಾದವರಿಲ್ಲ, ಆಕೆಯಷ್ಟು ಚತುರಳೂ ದಯಾಳುವೂ ಜಗತ್ತಿನಲ್ಲಿ ಯಾರಿರಲಿಕ್ಕಿಲ್ಲವೆಂದು ತಿಳಿದುಕೊಂಡಿದ್ದರು. ಆಕೆ ನಿಜವಾಗಿಯೂ ನಮ್ಮೊಡನೆ, ಅದರಲ್ಲೂ ನನ್ನೊಡನೆ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದಳು—ತನ್ನ ಮಗ ಮದುವೆಯಾಗುವನೆಂಬುದರಲ್ಲಿ ಆಕೆಗೆ ಹಿಗ್ಗು; ಅವರು ಇನ್ನೂ ಹೆಚ್ಚಿನವರ ಹೆಣ್ಣು ನೋಡಬಹುದಾಗಿತ್ತೆಂಬುದನ್ನು ನಾನು ಮನವರಿಕೆ ಮಾಡಿಕೊಂಡಿರಬೇಕೆಂದವಳ ಅಪೇಕ್ಷೆ. ನಾನು ಅದನ್ನು ತಿಳಿದು ಕೊಂಡೆ—ಆ ಅಭಿಪ್ರಾಯವೂ ಸರಿಯೆಂದೂ ತೋರಿತು.

ಆ ಎರಡು ವಾರಗಳಲ್ಲಿ ನಾವು ಬೆಟ್ಟಿಯಾಗುತ್ತಲಿದ್ದೆವು. ಅವರು ಭೋಜನಕ್ಕೆ ಬಂದವರು ನಡುರಾತ್ರಿಯವರೆಗೆ ಉಳಿಯುತ್ತಿದ್ದರು. ನನ್ನನ್ನು ಬಿಟ್ಟು ತಮಗೆ ಸ್ವತಂತ್ರವಾದ ಅಸ್ತಿತ್ವವಿಲ್ಲವೆಂದು ಅವರು ಹೇಳಿದರೂ—ಅವರು ಸತ್ಯವನ್ನೆ ಹೇಳುತ್ತಿದ್ದರೆಂದು ನಾನರಿತಿದ್ದೆ—ನನ್ನೆಡೆಗೆ ಕುಳಿತುಕೊಂಡು ಇಡಿ ದಿನ ಕಳೆದರೆಂದಾಗಲಿಲ್ಲ—ತಮ್ಮ ಕೆಲಸ ಬಿಟ್ಟಿರಲಿಲ್ಲ. ಮದುವೆಯಾಗುವವರೆಗೆ—ಆ ದಿನದ ವರೆಗೆ ನಮ್ಮ ನಡತೆ ನಡಾವಳಿಯಲ್ಲಿ ಯಾವ ಬದಲೂ ಆಗಲಿಲ್ಲ—'ನೀವು' 'ತಾವು' ಎಂದೆ ಒಬ್ಬರನ್ನೊಬ್ಬರು ಸಂಬೋಧಿಸುತ್ತಿದ್ದೆವು ಅವರು ನನ್ನ ಕೈ ಮುತ್ತಿಡಲಿಲ್ಲ—ನನ್ನನ್ನು ಏಕಾಂತದಲ್ಲಿ ಕಾಣಲು ಪ್ರಯತ್ನಪಡಲಿಲ್ಲ—ಆದಷ್ಟು ಅಂಥ ಪ್ರಸಂಗಗಳನ್ನು ನಿರಾಕರಿಸುತ್ತಿದ್ದರು. ಪ್ರೇಮದ ಅತಿರೇಕದಿಂದೇನಾಗುವುದೊ ಏನೊ ಎಂಬ ಭೀತಿಯಿಂದಲೊ ಏನೊ. ನಮ್ಮಿಬ್ಬರಲ್ಲಿ ಬದಲು ಹೊಂದಿದ್ದು ಯಾರೆಂಬುದನ್ನು ನಾನು ಹೇಳಲಾರೆ. ನಾನು ಅವರಿಗೆ ಸರಿಸಮಾನಳಾಗಿದ್ದೆನೆಂದು ನಾನೆಂದುಕೊಂಡಿದ್ದೆ. ಮೊದ ಮೊದಲು ಕಾಣುತ್ತಿರುವ—ನನ್ನನ್ನು ಮರುಕಗೊಳಿಸುತ್ತಿರುವ ಸರಳ ಸ್ವಭಾವದ ಸೋಗು ಅವರಲ್ಲೀಗ ಉಳಿದಿರಲಿಲ್ಲ. ನಾನೀಗವರನ್ನು ನೋಡುವಾಗ ಅಲ್ಲದ ಭಯವನ್ನು ಹುಟ್ಟಿಸುವ ವಯಸ್ಕರನ್ನು ಕಾಣದೆ

ಒಂದು ಪ್ರೀತಿ ಬರುವ ಹಸುಗೂಸನ್ನೆ ಕಾಣುತ್ತಿದ್ದುದಕ್ಕೆ ಆನಂದಪಡುತ್ತಿದ್ದೆ: ” ನಾನೆನುತ್ತಿದ್ದೆ; “ಅವರೂ ನನ್ನಂತೆ ಒಬ್ಬ ಮಾನವ ಪ್ರಾಣಿಯಿರುವರು ” ಅವರ ಚಾರಿತ್ರವೆಲ್ಲ ನನ್ನೆದುರಿಗೆ ಬಿಚ್ಚಿಟ್ಟಂತ್ತಿತ್ತು—ನಾನದನ್ನು ಚನ್ನಾಗಿ ತಿಳಿದುಕೊಂಡಿದ್ದೆನಿಸಿತು. ಆ ಚಾರಿತ್ರದಲ್ಲಿಯ ಒಂನೊಂದು ಅಂಗವು ನನಗೆ ಅದೆಷ್ಟು ಸರಿಹೋಗುತ್ತಿದ್ದುವು. ನಮ್ಮ ಮುಂದಿನ ಆಯುಷ್ಯದ ಬಗೆಗೆ ಅವರು ಯೋಚಿಸಿದ ಯೋಜನೆಗಳು ನನ್ನವೆ ಎಂಬುದಾಗಿದ್ದುವು—ಒಳ್ಳೆಯ ಶಬ್ದಗಳಲ್ಲಿ ಸುಸ್ಪಷ್ಟವಾಗಿ ವ್ಯಕ್ತವಾಗಿರುತ್ತಿದ್ದುವಷ್ಟೆ!

ಹವೆಯು ಆಗ ಚನ್ನಾಗಿರಲಿಲ್ಲ—ನಾನು ಮನೆಯಲ್ಲಿಯೆ ಕಾಲ ಕಳೆಯುತ್ತಿದ್ದೆವು. ನಾವು ಏಕಾಂತದಲ್ಲಿ ಮಾತುಕತೆಯಾಡುವ ಸ್ಥಳವೆಂದರೆ ಪಿಯಾನೊ ಮತ್ತು ಕಿಟಕಿ ಇವುಗಳ ನಡುವಿದ್ದ ಮೂಲೆ. ನಮ್ಮ ಹತ್ತರಿದ್ದ ಕಿಟಕಿಯ ಕರಿ ಛಾಯೆಯಲ್ಲಿ ಮೊಂಬತ್ತಿಯ ಪ್ರಕಾಶ ಪ್ರತಿಬಿಂಬಿಸಿರುತ್ತಿತ್ತು ಆಗಾಗ ಮೇಣದ ಹನಿಗಳು ಗಾಜಿಗೆ ಸಿಡಿದು ಕೆಳಗುರುಳುತ್ತಿದ್ದುವು. ಚಪ್ಪರದ ಮೇಲೆ ಮಳೆ ಪಟಗುಡುತ್ತಿತ್ತು; ಹರಿಯ ಕೆಳಗೆ ನೀರು ಚಿಲ್ಲ ಚಿಲ್ಲ ಸಿಡಿಯುತ್ತಿತ್ತು—ಕಿಟಕಿಯ ಹತ್ತರವೆಲ್ಲ ತೇವು ನಾವು ನಿಂತುಕೊಂಡ ಮೂಲೆಯಲ್ಲಿ ಮಾತ್ರ ಬೆಚ್ಚಗೆ.

“ನನಗೊಂದು ಹೇಳುವುದಿದೆ—ತಿಳಿಯಿತೆ, ” ಒಂದು ರಾತ್ರಿ ನಾವು ಮೂಲೆಯಲ್ಲಿ ಕುಳಿತಾಗ ಅವರು ಪ್ರಾರಂಭಿಸಿದರು, “ನೀವು ಪಿಯಾನೊ ನುಡಿಸುತ್ತಿದ್ದಾಗಲೆಲ್ಲ ನಾನದನ್ನೆ ಧ್ಯಾನಿಸುತ್ತಿದ್ದೆ. ”

“ಹೇಳುವ ಆವಶ್ಯಕತೆಯಿಲ್ಲ—ನನಗೆಲ್ಲ ಗೊತ್ತಿದೆ ” ನಾನು ಉತ್ತರ ಕೊಟ್ಟೆ.

“ಹಾಗೇ ಆಗಲಿ. ಬಾಯಿ ಮುಚ್ಚಿದೆ. ”

“ಹಾಗಲ್ಲ. ಅದೇನು ? ” ನಾನು ಕೇಳಿದೆ.

“ಇಷ್ಟೆ. ಅ ಬ ಅವರ ಕತೆ ನಿಮ್ಮ ನೆನಪಿನಲ್ಲಿರುವುದಷ್ಟೆ ? ”

“ಇದೆ ಎಂದೆನ್ನೋಣ. ಎಂಥ ಪೋಕರಿ ಕತೆಯದು ಅದು ಆ ರೀತಿ ಮುಕ್ತಾಯ ಹೊಂದಿದ್ದೂ ಸರಿಯೆ. ”

"ಆಹುದು. ನನ್ನ ಮೈಮೇಲೆ ನಾನೆ ಕಲ್ಲ ಚಲ್ಲಿಕೊಂಡು ನನ್ನ ಸುಖವನ್ನು ಹಾಳುಮಾಡಿಕೊಳ್ಳುತ್ತಿದ್ದೆ. ನೀವು ನನ್ನನ್ನುಳಿಸಿದಿರಿ. ಮುಖ್ಯವಾದ ಮಾತೆಂದರೆ ನಾನು ಆಗ ಸುಳ್ಳು ಹೇಳುತ್ತಿದ್ದೆ—ನನಗೀಗ ನಾಚಿಕೆಯೆನಿಸುತ್ತಿದೆ ಆ ಬಗೆಗೆ- ಈಗ ನನಗೆ ಹೇಳಬೇಕೆಂಬುದನ್ನೆಲ್ಲ ಹೇಳಬೇಕೆಂದಿದ್ದೇನೆ."

"ಬೇಡ. ನೀವು ಹೇಳಲೆ ಕೂಡದು."

"ಭಯಪಡಬೇಡಿರಿ." ಅವರು ನಗುತ್ತ ನುಡಿದರು; ನಾನು ಮಾಡಿದ್ದು ಸರಿಯೆಂದು ಹೇಳಬೇಕಾಗಿದೆ. ನಾನು ಪ್ರಾರಂಭಿಸಿದ್ದೇ ಆ ಮಾತನ್ನು ಚರ್ಚಿಸುವುದಕ್ಕಾಗಿ."

"ಚರ್ಚಿಸುವುದೆ ತಪ್ಪು." ನಾನೆಂದೆ.

"ಅಹುದು. ನಾನು ತಪ್ಪಾಗಿ ಚರ್ಚಿಸಿದೆ. ನನ್ನ ಆಯುಷ್ಯದಲ್ಲಿ ಅನೇಕ ಸಲ ನಿರಾಶೆ ಹೊಂದಿ ತಪ್ಪುಗಳನ್ನು ಮಾಡಿ ಕೊನೆಗೆ ಈ ಸಲ ಈ ಹಳ್ಳಿಗಾಡಿಗೆ ಬಂದಾಗ ಪ್ರೇಮಗೀಮ ನನ್ನ ಪಾಲಿನವಲ್ಲ ಸುಸೂತ್ರ ಬಾಳುವಿತನ ಹೊಂದಬೇಕೆಂದಿದ್ದೆ. ಎಷ್ಟೊ ದಿನಗಳ ವರೆಗೆ ನಿಮ್ಮ ಬಗೆಗೆ ನನ್ನ ಭಾವನೆಗಳನ್ನೂ, ಮಜಲು ಎಲ್ಲಿಗೆ ಮುಟ್ಟಬಹುದೆಂಬುದನ್ನೂ ಅರಿಯದಾಗಿದ್ದೆ. ಆಸೆಪಟ್ಟೆ—ಆಸೆಪಡಲಿಲ್ಲ. ಒಮ್ಮೆ ನೀವು ನನ್ನನ್ನು ನಗೆಯಾಡುತ್ತೀರೆಂದು ತಿಳಿದುಕೊಳ್ಳುತ್ತಿದ್ದೆ; ಮತ್ತೊಮ್ಮೆ ನಿಮ್ಮ ಬಗೆಗೆ ವಿಶ್ವಾಸವಿದ್ದು ನಾನೆ ಏನು ನಿಶ್ಚಯಿಸಬೇಕೆಂದು ಕಾಣದಾಗುತ್ತಿದ್ದೆ. ಆ ದಿನ ಸಂಜೆಯ ನಂತರ, ನಿಮ್ಮ ನೆನಪಿನಲ್ಲಿದೆ ಆ ಸಂಜೆ, ನಾವು ತೋಟದಲ್ಲಿ ತಿರುಗಾಡುತ್ತಿದ್ದಾಗ ನಾನು ನಡುಗಿದೆ. ಈ ಸುಖವು ನನ್ನನ್ನು ಮೀರಿದ್ದೆಂದು ಮನವರಿಕೆ ಮಾಡಿಕೊಂಡಿ. ಮೊದಲು ಆಶೆಪಟ್ಟು ಮುಂದೆ ಯಶವು ದೊರೆಯದಿದ್ದರೆ? ಅರ್ಥಾತ್ ನಾನು ನನ್ನ ಪುಟ್ಟಿಗೆ ವಿಚಾರ ಮಾಡುತ್ತಿದ್ದೆ—ನಾನಷ್ಟು ಸ್ವಾರ್ಥಿಯಾಗಿರುವೆನು."

ಅವರು ಸುಮ್ಮನಾಗಿ ನನ್ನೆಡೆಗೆ ನೋಡಿದರು.

"ನಾನಾಗ ತಿಳಿದುಕೊಂಡದ್ದೆಲ್ಲ ಅರ್ಥಶೂನ್ಯವಿರಲಿಲ್ಲ. ನನಗೆ ಭೀತಿಯಿರುವದು ಶಕ್ಯವೂ ಸಾಹಜಿಕವೂ ಆಗಿತ್ತು. ನನಗೆ ನಿಮ್ಮಿಂದ ದೊರೆಯುವುದು ಇಷ್ಟು—ನಾನು ನಿಮಗೆ ಕೊಡುವುದು ಇಷ್ಟು. ನೀವಿನ್ನೂ ಒಂದು

ಎಳೆ ಮಗು—ಅರಳಬೇಕಾದ ಒಂದು ಮೊಗ್ಗು. ನೀವಿನ್ನೂ ಪ್ರೀತಿಯ ಸೆಳವಿಗೆ ಬಿದ್ದವರಲ್ಲ—ನಾನೆ—"

"ನಿಜವಾಗಿ. ಹೇಳಿರಿ ಹಾಗಾದರೆ—" ನಾನು ಪ್ರಾರಂಭಿಸಿದೆ—ಅವರೇನು ಉತ್ತರಕೊಂಡವರೊ ಎಂದು ಭಯಗೊಂಡು ಸುಮ್ಮನಾದೆ. "ಬೇಡ. ಅದಿರಲಿ ಹಾಗೆ—" ನಾನು ಮತ್ತೆ ನುಡಿದೆ.

"ನಾನು ಈ ಮೊದಲು ಎಂದಾದರೂ ಪ್ರೀತಿಯ ಸೆಳವಿಗೆ ಬಿದ್ದದ್ದೆ? ಹೀಗೇ ಅಹುದಲ್ಲವೊ?" ನನ್ನ ವಿಚಾರಗಳನ್ನರಿತು ಅವರು ನುಡಿದರು; "ಅದನ್ನು ನಾನು ಹೇಳಬಲ್ಲೆ. ಇಲ್ಲ—ಎಂದೂ ಇಲ್ಲ—ಈಗಿನಂತೆ ಎಂದೂ ಇಲ್ಲ." ಯಾವುದೊ ಒಂದು ದುಃಖದ ಸ್ಮೃತಿ ಅವರ ಮನದಲ್ಲಿ ಮಿಂಚಿ ಹೋದಂತಿತ್ತು. "ಇಲ್ಲ," ಅವರು ವಿಷಾದದಿಂದ ನುಡಿದರು; "ನಿಮ್ಮನ್ನು ಪ್ರೀತಿಸುವ ವಿಷಯದಲ್ಲಿ ನಾನು ನಿಮ್ಮ ದಯೆಯನ್ನೆ ಕೋರುತ್ತೇನೆ. ನಿಮ್ಮನ್ನು ಪ್ರೀತಿಸುವೆನೆಂದು ಹೇಳುವ ಮೊದಲು ಎರಡು ಸಲ ವಿಚಾರಮಾಡುವುದಾವ ಶಕ್ಯವಿರಲಿಲ್ಲವೆ? ನಾನು ನಿಮಗರ್ಪಿಸುವುದೇನು? ಪ್ರೀತಿಯೆ ಮತ್ತೆ."

"ಅದಾದರೂ ಕಡಿಮೆಯದಾಯಿತೆ?" ನಾನು ಅವರ ಮೋರೆಯ ಕಡೆಗೆ ನೋಡುತ್ತ ನುಡಿದೆ.

"ಅಹುದು. ನಿಮ್ಮ ಮಟ್ಟಿಗೆ ಕಡಿಮೆಯೆ." ಅವರು ಮುಂದೆ ನುಡಿದರು; "ನಿಮಗೊ, ತಾರುಣ್ಯವಿದೆ, ಸೌಂದರ್ಯವಿದೆ. ಇಡಿ ರಾತ್ರಿ ಎಚ್ಚತ್ತು ಹಾಸುಗೆಯ ಮೇಲೆ ಬಿದ್ದುಕೊಂಡು ವಿಚಾರ ಮಾಡಿರುತ್ತೇನೆ—ಸುಖಕ್ಕೆ ಆವಶ್ಯಕವಾದುದೇನೆಂಬುದನ್ನು ತಿಳಿದುಕೊಂಡಿದ್ದೇನೆ. ಹಳ್ಳಿಗಾಡಿನಲ್ಲಿಯ ಶಾಂತಿಮಯ ಜೀವನ—ನಾಲ್ಕು ಜನರಿಗೆ ಸಾಹಾಯ್ಯವಾಗುವುದು—ಸುಲಭವಿದ್ದರೂ ಯಾರೂ ಯಾರ ಕಲ್ಯಾಣ ಮಾಡುವುದು—ಉಪಯುಕ್ತವಾದ ಕೆಲಸದಲ್ಲಿ ತೊಡಗುವುದು—ಆಮೇಲೆ ವಿಶ್ರಾಂತಿ-ನಿಸರ್ಗ, ಪುಸ್ತಕಗಳು, ಸಂಗೀತ—ನೆರೆಹೊರೆಯವರ ಬಗೆಗೆ ಆಸ್ಥೆ—ಇದು ನನ್ನ ಸುಖದ ಕಲ್ಪನೆ. ಆಮೇಲೆ ಎಲ್ಲಕ್ಕೂ ಮಿಗಿಲಾದುದೆಂದರೆ ಜೊತೆಗಾರ್ತಿಯಾಗಿ ನೀವಿರುವುದು-ಮಕ್ಕಳು—ಮನುಷ್ಯನು ಇದಕ್ಕೂ ಹೆಚ್ಚಿನದೇನು ಬಯಸುವನು?"

“ ಇಷ್ಟೆಂದರೆ ಸಾಕು. ” ನಾನೆಂದೆ.

“ ಹರೆತನವನ್ನು ಹಿಂದೆ ಬಿಟ್ಟವನಿಗಿಷ್ಟು ಸಾಕು ” ಅವರು ಮುಂದೆ ನುಡಿದರು. “ ನಿಮಗಲ್ಲ. ನಿಮ್ಮೆದುರಿಗಿನ್ನೂ ಇಡಿ ಆಯುಷ್ಯವಿದೆ—ನೀವು ಸುಖಕ್ಕಾಗಿ ಹೆಣಗಬಹುದು. ಇನ್ನಾವುದಾದರೂ ಸುಖ ಕಾಣಬಹುದು--ನೀವು ಈಗ ನನ್ನನ್ನು ಪ್ರೀತಿಸುವ ಮೂಲಕ ಇದೆ ಸುಖವೆಂದು ಹೇಳಬಹುದು. ”

“ ನಿಮ್ಮದು ತಪ್ಪು ತಿಳಿವಳಿಕೆ, ” ನಾನೆಂದೆ “ ನಾನು ಇದೆ ಸುಸೂತ್ರವಾದ ಜೀವನವನ್ನು ಬಯಸುತ್ತಿದ್ದೇನೆ--ಇದಕ್ಕೇ ಬೆಲೆ ಕೊಡುತ್ತ ಬಂದಿದ್ದೇನೆ. ನಾನು ಬಯಸುತ್ತಿದ್ದುದನ್ನೆ ನೀವಿದೆ ಈಗ ಹೇಳಿದ್ದು. ”

ಅವರು ನಸುನಕ್ಕರು.

“ ಇದು ಕಲ್ಪನೆಯಿದೆ ನಿಮ್ಮದು—ಅಷ್ಟು ನಾಲದು. ನಿಮ್ಮಲ್ಲಿ ತಾರುಣ್ಯವಿದೆ, ಸೌಂದರ್ಯವಿದೆ. ” ಅವರು ವಿಚಾರಪೂರ್ವಕವಾಗಿ ನುಡಿದರು.

ನನ್ನ ಮಾತಿನ ಮೇಲೆ ಅವಿಶ್ವಾಸ ಮಾಡುತ್ತಿದ್ದುದಕ್ಕಾಗಿ ರೇಗಿದೆ—ನನ್ನ ತಾರುಣ್ಯ, ನನ್ನ ಸೌಂದರ್ಯ ನನ್ನ ಮೋರೆಗೆವರು ತಿವಿಯುತ್ತಿರುವಂತೆನಿಸಿತು.

“ ನೀವು ನನ್ನನ್ನು ಪ್ರೀತಿಸುತ್ತಿರುವುದಾದರೂ ಏಕೆ? ” ನಾನು ರೇಗಿ ಕೇಳಿದೆ. “ ನನ್ನ ತಾರುಣ್ಯಕ್ಕಾಗಿಯೊ ನನಗಾಗಿಯೊ? ”

“ ಅದನ್ನು ನಾನರಿಯೆ--ಪ್ರೀತಿಸುತ್ತಿರುವುದೇನೊ ನಿಜ. ” ನನ್ನೆಡೆಗೆ ನೇರವಾಗಿ ನನ್ನನ್ನು ಸೆಳೆಯುವಂತೆ ನೋಡುತ್ತ ಅವರು ಉತ್ತರ ಕೊಟ್ಟರು.

ನಾನು ಉತ್ತರ ಕೊಡಲಿಲ್ಲ—ಅವರ ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ. ಒಮ್ಮೆಲೆ ಒಂದು ವಿಚಿತ್ರವು ಒದಗಿತು; ಮೊದಲು ನನ್ನ ಸುತ್ತಲಿದ್ದುದನ್ನೆಲ್ಲ ಕಾಣದಾದೆ. ಅವರ ಮುಖ ಕಾಣದಾಗುತ್ತ ಬರಿ ಅವರ ಕಣ್ಣುಗಳೆರಡು ಉಳಿದುವು; ಆಮೇಲೆ ಆ ಕಣ್ಣುಗಳು ನನ್ನಲ್ಲಿ ಹುಟ್ಟಿ ಎಲ್ಲವೂ ಸವರಿದಂತಾಯಿತು—ನನಗೇನೂ ಕಾಣದಂತಾಗಿ ನಾನು ನನ್ನ ಕಣ್ಣುಗಳನ್ನು ಮುಚ್ಚಬೇಕಾಯಿತು—ಅವರ ನೋಟದಿಂದ ನನ್ನಲ್ಲಿ ಹುಟ್ಟಿದ ಸುಖ ಭಾವನೆ, ಭೀತಿಗಳಿಂದ ಬಿಡುಗಡೆ ಹೊಂದುವುದಕ್ಕಾಗಿ................

ನಮ್ಮ ಮದುವೆಯ ಮುಂಚಿನ ದಿನ ಸಾಯಂಕಾಲ ಹೊರಪಾಗಿತ್ತು. ಬೇಸಿಗೆಯಲ್ಲಿ ಜಡಿಯಿಟ್ಟ ಮಳೆ ಹರವಾಗಿ ಶರತ್ಕಾಲದ ಸಂಜೆಯಲ್ಲಿದ್ದಂತೆ ಹೊಳಪು ಚೆಳಿ ಇತ್ತು ಸುತ್ತುಕಡೆ. ಜಗತ್ತು ತೇವು, ಚೆಳಿ ಹೊಳಪುಗಳಿಂದ ತುಂಬಿತ್ತು—ತೋಟದಲ್ಲಿ ಎಲ್ಲೆಲ್ಲಿಯೂ ಶರತ್ಕಾಲದಲ್ಲಿಯಂತೆ ಹರವು, ಬರಲು, ಬಣ್ಣಗಳೆ ಕಾಣುತ್ತಿದ್ದುವು. ಮುಗಿಲು ನಿಚ್ಚಳ— ಚೆಳಿ ತಿಳಿಗಳಿಂದ ಮುಸುಕಿತ್ತು. ನಾಳೆ ನಮ್ಮ ಮದುವೆ—ಎಲ್ಲೆಲ್ಲಿಯೂ ನಿಚ್ಚಳ ಹೊರಪು, ನಾನು ಇದೆ ವಿಚಾರದೊಂದಿಗೆ ಮಲಗಿಕೊಂಡೆ. ಮರುದಿನ ಸೂರ್ಯನೊಂದಿಗೆ ಎದ್ದೆ—ಇಂದೆ....ಎಂಬ ವಿಚಾರದಿಂದ ಆಶ್ಚರ್ಯ ಭಯಗಳಿಗೊಳಗಾಗದೆ— ತೋಟ-ಲ್ಲಿಳಿದೆ. ಆದೆ ಸೂರ್ಯೋದಯವಾಗಿತ್ತು—ಬರಲಾಗಿ ಬಿದ್ದ ಲಿಂಬೆ ಗಿಡಗಳ ಹಳದಿ ಎಲೆಗಳಲ್ಲಿ ಹೊಳಪು ಅಲ್ಲಲ್ಲಿ ಕಾಣುತ್ತಿತ್ತು. ಕಾಲವಾರಿಯಲ್ಲಿ ಎಲೆಗಳು— ಗಿಡಗಳ ಮೇಲೆ ಕಾಡ ಬೆರಿ ಹಣ್ಣುಗಳ ಗೊಂಚಲು ಗೊಂಚಲಾಗಿ ಸುರಿದಿದ್ದುವು—ಎಲೆಗಳೊ ಮಂಜಿನಲ್ಲಿ ಮುಳುಗಿದ್ದುವು. ಕರಿಯ ಡಾಲಿಯ ಹಣ್ಣುಗಳೊ ಸುರಿದು ಮುದರಿ ಹೋಗಿದ್ದುವು. ಹಚ್ಚ ಹಸಿರು ಹುಲ್ಲಬನ್ನಿಯಲ್ಲಿ ಮುಂಗಾರಿಯ ಇಬ್ಬನ್ನಿ ಬೆಳ್ಳಿಯಂತೆ ಹೊಳೆಯುತ್ತಿತ್ತು. ನಿಚ್ಚಳವಾದ ಮುಗಿಲಲ್ಲಿ ಒಂದು ಮೋಡವಾದರೂ ಇರಲಿಲ್ಲ.

“ಇಂದೆ ಎಂಬುದು ಶಕ್ಯವಿದ್ದೀತೆ?” ನಾನು ನನ್ನನ್ನೆ ಕೇಳಿಕೊಂಡೆ-ನನ್ನ ಸುಖದ ಬಗೆಗೆ ಅವಿಶ್ವಾಸವೆನಿಸಿತು ನನಗೆ. “ನಾಳಿನ ಬೆಳಗು ನಾನು ಇಲ್ಲಿ ಅಲ್ಲ, ಬೇರೊಂದು ಮನೆಯಲ್ಲಿ—ದೊಡ್ಡ ದೊಡ್ಡ ಕಂಬಳಿಗಳಿದ್ದ ಮನೆಯಲ್ಲಿ ನೋಡತಕ್ಕವಳೆಂಬುದ ಶಕ್ಯವಿದ್ದೀತೆ? ಈ ಮುಂದೆ ನಾನು ಅವರಿಗಾಗಿ ಕಾಯ್ದುಕೊಂಡು ಕುಳಿತುಕೊಳ್ಳುವುದಿಲ್ಲ—ಭೆಟ್ಟಿಯಾಗುವುದಿಲ್ಲ—ಕಾಟ್ಯೆಳೊಡನೆ ಅವರ ಬಗೆಗೆ ಮಾತನಾಡುತ್ತ ಸುರುಪೊತ್ತಿನವರೆಗೆ ಕುಳಿತುಕೊಳ್ಳುವುದಿಲ್ಲವೆಂಬುದು ಶಕ್ಯವಿದ್ದೀತೆ? ನಾನಿನ್ನು ನಮ್ಮ ದಿವಾಣಖಾನೆಯಲ್ಲಿ ಪಿಯಾನೋದ ಹತ್ತಿರ ಅವರ ಬಳಿ ಕುಳಿತುಕೊಳ್ಳಲಾರೆನೆ? ಅವರನ್ನು ಕಳುಹಿ ಮತ್ತೆ ರಾತ್ರಿ ಅವರ ಬಗೆಗೇ ವಿಚಾರ—ಮಾಡುತ್ತ ಅಸ್ವಸ್ಥತೆಯಿಂದ ಕಳೆಯಲಾರೆನೆ?” ಹಿಂದಿನ ದಿನ ತಾವು ಕೊನೆಯ ಸಲ ನಮ್ಮ ಮನೆಗೆ ಬರುವುದಾಗಿ ವಚನ ಕೊಟ್ಟಿದ್ದರು—ನಾನು ನನ್ನ ಮದುವೆಯ ಉಡುಪು ಧರಿಸಿ ನೋಡಬೇಕೆಂದು ಕಾಟ್ಯಾ ಆಗ್ರಹಪಟ್ಟಾಗ, ‘ನಾಳೆಗಾಗಿಯೆ!’ ಎಂದು ನುಡಿ

ದಿದ್ದರು. ನನಗೆ ಎಲ್ಲವೂ ನಿಜವಾಗಿಯೆ ತೋರಿತು—ಆದರೂ ಯಾವುದರಲ್ಲಿಯೂ ವಿಶ್ವಾಸವೆನಿಸಲಿಲ್ಲ. " ಇಂದಿನ ನಂತರ ಅಲ್ಲಿ ಅತ್ತೆಯೊಡನೆ—ನಾಡೆಝ್ಬಳನ್ನು ಬಿಟ್ಟು, ಮುದುಕ ಗ್ರಿಗೋರಿಯನ್ನು ಬಿಟ್ಟು ಕಾಟ್ಯಳನ್ನು ಬಿಟ್ಟು ನಾನಿರಬಹುದೆ? ಮಲಗುವಾಗ ನಾನು ನಿತ್ಯದಂತೆ ನಮ್ಮ ಮುದಿ ದಾದಿಯನ್ನು ಮುತ್ತಿಟ್ಟಾಗ ಆಕೆ ತನ್ನ ಕೊರಳಲ್ಲಿದ್ದ ಕ್ರೂಸ ತೆಗೆದು ನನ್ನ ಮೈಗೆ ಹಚ್ಚಿ "ರಾತ್ರಿ ಸುಖವಾಗಲಿ, ತಾಯಿ! ಎಂದೆನ್ನುತ್ತಿದ್ದಳು—ಅದೆಲ್ಲವೂ ಇನ್ನಿರಲಾರದೆ? ಸೋನ್ಯಳಿಗೆ ನಾನಿನ್ನು ಕಲಿಸಲಾರೆನೆ?—ಆಕೆಯೊಂದಿಗೆ ಆಡಲಾರೆನೆ!—ಆಕೆಯ ಬಿರಿನಗೆಯನ್ನು ಗೋಡೆಯೀಚೆಯಿಂದ ಕೇಳಲಾರೆನೆ? ಇಂದಿನಿಂದ ನಾನು ನನಗೆ ಅರಿಯದ ಯಾವಳೊ ಒಬ್ಬಳಾಗುವೆನೆ? ನನ್ನ ಆಶೆ ಆಕಾಂಕ್ಷೆಗಳಿಗೆ ಅನುವು ಕೊಡುವ ಹೊಸ ಜಗತ್ತು ಅರಳುವುದಿದೆಯೆ? " ಈ ವಿಚಾರದಲ್ಲಿ ಒಬ್ಬಳೆ ಕುಳಿತಾಗ ಅವರ ಬರವಿಗಾಗಿ ಹವಣಿಸುತ್ತಿದ್ದೆ. ಅಂದು ಮುಂಚಿತವಾಗಿಯೆ ಬಂದರು—ನಾನು ಅಂದೆ ಅವರ ಹೆಂಡತಿಯಾಗುವೆನೆಂಬುದನ್ನು ನಂಬುವುದಕ್ಕೆ ಅವರು ಬರುವುದು ಅಗತ್ಯವಿತ್ತು—ಮುಂದಿನ ವಿಚಾರವು ಭೀತಿಪಡಿಸದಾಯಿತು.

ಭೋಜನಕ್ಕೆ ಮೊದಲು ನಾವು ದೇವಾಲಯಕ್ಕೆ ಹೋದೆವು—ಅಲ್ಲಿ ನಮ್ಮ ತಂದೆಯವರ ಸ್ಮರಣಾರ್ಥ ಪ್ರಾರ್ಥನೆಯಾಗತಕ್ಕದ್ದಿತ್ತು.

" ಅವರೀಗ ಬದುಕಿದ್ದರೆ! " ಮರಳಿ ಬರುವಾಗ ನಾನು ಯೋಚಿಸುತ್ತಿದ್ದೆ—ನಾನು ಆಗ ನನ್ನ ಪೂಜ್ಯ ಭಾವನೆಗೆ ಅರ್ಹರಾದ ತಂದೆಯವರ ಪರಮ ಸ್ನೇಹಿತರ ಕೈಯನ್ನೆ ಆಶ್ರಯಿಸಿದ್ದೆ. ಪ್ರಾರ್ಥನೆ ನಡೆದಾಗ ಆ ದೇವಾಲಯದ ತನಿವಿದ್ದ ನೆಲಕ್ಕೆ ನನ್ನ ಹಣೆ ಹಚ್ಚಿದ್ದಾಗ ತಂದೆಯವರ ಮೂರ್ತಿಯನ್ನು ಕಣ್ಣೆದುರಿಗೆ ತಂದುಕೊಂಡೆ—ಅವರು ನನ್ನ ಮನೋಭಾವವನ್ನರಿತುಕೊಂಡರು—ನಾನು ನಿಶ್ಚಯಿಸಿದವರಿಗೆ ಒಪ್ಪಿಗೆಯಿತ್ತರೆಂದು ನನ್ನ ಮನವರಿಕೆಯಾಯಿತು—ಅವರ ಆತ್ಮನು ಅಲ್ಲಿಯೆ ಸುಳಿದಾಡಿ ನನ್ನನ್ನಾಶೀರ್ವದಿಸುತ್ತಿದ್ದನೆಂದೆನಿಸಿತು. ನನ್ನ ನೆನವುಗಳೂ ಆಶೆಗಳೂ, ನನ್ನ ವಿಷಾದ ಹರ್ಷಗಳೂ ಕೂಡಿದ ಒಂದು ಧೀರ ಗಂಭೀರವಾದ ಭಾವವು ಹೊರಹೊಮ್ಮಿತು—ಹೊರಗಿನ ವಾತಾವರಣಕ್ಕೊ, ಶಾಂತತೆಗೊ, ಬರಿಯಾದ ಹೊಲಗಳಿಗೊ ತಿಳಿಯಾಗಿದ್ದ ಮುಗಿಲಿಗೊ ಸರಿಹೋಗುವಂತಿತ್ತು ಆ ಭಾವ—ಮುಗಿಲಿನಿಂದ ಹೊರಟ

ನಿಸ್ತೇಜ ಕಿರಣಗಳು ನನ್ನ ಗಲ್ಲಗಳ ಮೇಲೆ ಅಲೆದಾಡಿ ಆ ಪ್ರದೇಶವನ್ನು ಮಿಂಚಿಸುತ್ತಿದ್ದುವು. ನನ್ನ ಜೊತೆಗಾರರು ನನ್ನ ಭಾವಗಳನ್ನರಿತು ಅವುಗಳಲ್ಲಿ ಸಹ ಭಾಗಿಗಳಾದಂತೆನಿಸಿತು. ಅವರು ಮಾತನಾಡದೆ ಮೆಲ್ಲನೆ ನಡೆದಿದ್ದರು. ಅವರ ಮುಖ-ನಾಸದರ ಕಡೆಗೆ ಆಗಾಗ ನೋಡತೊಡಗಿದ್ದೆ-ಒಂದು ಧೀರ ಗಂಭೀರ ಭಾವವನ್ನು ತೋರುತ್ತಿತ್ತು. ಹರ್ಷ ವಿಷಾದಗಳ ಸಮ್ಮಿಶ್ರಣವದು— ನಾನು ಅದರಲ್ಲಿ ನಿಸರ್ಗದೊಡನೆ ಕೂಡಿಕೊಂಡಿದ್ದೆ.

ಅವರು ಒಮ್ಮೆಲೆ ನನ್ನೆಡೆಗೆ ನೋಡಿದರು - ನನಗೇನೊ ಹೇಳುವದಿದೆ ಎಂದು ನಾನು ತಿಳಿದುಕೊಂಡೆ. "ಈಗ ನನ್ನ ಮನಸಿನಲ್ಲಿದ್ದುದನ್ನು ಬಿಟ್ಟು ಮತ್ತೇನಾದರೂ ವಿಷಯವನ್ನು ಇವರು ತೆಗೆದರೆ?" ಎಂದು ನಾನು ಯೋಚಿಸುತ್ತಿದ್ದೆ. ಅವರು ತಂದೆಯವರ ವಿಷಯ ತೆಗೆದರು-- ಹೆಸರು ಮಾತ್ರ ತೆಗೆದುಕೊಳ್ಳಲಿಲ್ಲ.

"ಅವರು ಒಂದು ದಿನ ನನಗೆ ವಿನೋದದಿಂದ ನೀನು ಮಾಷೆಯನ್ನು ಮದುವೆಯಾಗಬೇಕು. ಎಂದಿದ್ದರು." ಅವರು ಪ್ರಾರಂಭಿಸಿದರು.

"ಈಗವರಿದ್ದರೆ ಸುಖವಾಗುತ್ತಿತ್ತವರಿಗೆ" ನಾನು ಉತ್ತರ ಕೊಟ್ಟೆ -- ನನ್ನ ಕೈ ಹಿಡಿದ ಅವರ ಕೈ ಹಿಸುಕಿದೆ.

"ನೀವು ಆಗ ಒಂದು ಮಗು," ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಅವರೆಂದರು. "ಆ ಕಣ್ಣುಗಳನ್ನು ನೋಡಿ ಪ್ರೀತಿ ಬರುತ್ತಿತ್ತು---ನಿಮ್ಮ ತಂದೆಯವರ ಕಣ್ಣುಗಳಂತೆ ಅವಿದ್ದುದರಿಂದ ಮುತ್ತಿಡುತ್ತಿದ್ದೆ—ನನಗಾಗ ಕಲ್ಪನೆಯಿರಲಿಲ್ಲ ಅವುಗಳನ್ನೆ ನಾನು ಈ ರೀತಿ ಪ್ರೀತಿಸಬಹುದೆಂದು. ಆಗ ನಾನು ಮಾಷಾ ಎಂದು ಕರೆಯುತ್ತಿದ್ದೆ."

"ಈಗ ನನ್ನನ್ನು ನೀನು ಎಂದು ಕರೆಯಬೇಕೆಂದು ಬಯಸುತ್ತೇನೆ." ನಾನೆಂದೆ.

"ಹಾಗೇ ಮಾಡಬೇಕೆಂದಿದ್ದೆ" ಅವರು ಉತ್ತರ ಕೊಟ್ಟರು. "ಇದೆ ಮೊದಲು ನೀನು ನನ್ನವಳಾಗಿರುವೆ ಎಂದೆನಿಸುತ್ತದೆ." ನನ್ನನ್ನು ಆವರಿಸಿಕೊಳ್ಳುತ್ತಿರುವ ಅವರ ನೋಟ ನನ್ನಲ್ಲಿ ನೆಲೆಸಿತು

ನಾವು ಕೋಲಿಸಿಪ್ಪಾಡಿಗಳಿಂದ ತುಂಬಿದ್ದ ಕಾಲದಾರಿ ತುಳಿಯುತ್ತ ಸಾಗಿದೆವು—ನಮ್ಮ ದನಿ ಕಾಲಸಪ್ಪಳ ಅಷ್ಟೆ ಕೇಳಬರುತಲಿದ್ದವು. ಒಂದು ಬದಿಗೆ ಕೆಂದಾದ ಕಂಟಿ ಹೊದರಿನಲ್ಲಿ ನುಸಳಿ ಅಡವಿಯಲ್ಲಿ ದೂರ ಅಡಗಿತ್ತು ( ದೂರದಲ್ಲಿ ಒಬ್ಬ ಬೇಸಾಯಿಗನು ಒಂದು ಹೊಲದ ಕರಿ ಹಾಳಿಯನ್ನು ಹರಗುತ್ತಿದ್ದನು ಆ ಹಾಳಿ ಮುಂದೆ ಹೋದಂತೆ ಹರವಾಗತೊಡಗಿತ್ತು. ) ( ಗುಡ್ಡದಡಿಯಲ್ಲಿ ಹರಿದಾಡುತ್ತಿರುವ ಕುದುರೆಗಳ ಹಿಂಡು ಹತ್ತಿರವೆ ಇದ್ದಂತೆ ತೋರಿತು. ) ಮತ್ತೊಂದು ಬದಿಗೆ, ನಮ್ಮ ತೋಟವಿದ್ದಷ್ಟು ದೂರದಲ್ಲಿ—( ನಮ್ಮ ಮನೆ ಗಿಡಗಳ ಗುಂಪಿನಲ್ಲಿ ಕಂಡೆ ಕಾಣುತ್ತಿತ್ತು )—ಒಂದು ಹೊಲ ಚಳಿಗಾಲದ ಪೈರಿನಿಂದ ತುಂಬಿತ್ತು—ಬಿಸಿಲಿಗೆ ಬಸಿಯೊಡೆದು ಕಪ್ಪು ನಡುನಡುವೆ ಹಸಿರು ಕಾಣುತ್ತಿತ್ತು. ಎಲ್ಲೆಲ್ಲಿಯೂ ಚಳಿಗಾಲದ ಸೂರ್ಯನು ಹೊಳೆಯುತ್ತಿದ್ದನು—ಎಲ್ಲೆಲ್ಲಿಯೂ ಜೇಡಗಳ ತಂತುಗಳು ಹರಡಿ ಹಾರಾಡಿ ನಮ್ಮ ಕಣ್ಣುಗಳಲ್ಲಿ, ಕಲೆಯಕೂದಲಲ್ಲಿ ಬಟ್ಟೆಗಳಲ್ಲಿ ನಸುಳುತ್ತಿದ್ದುವು—ಗಿಡ ಕಂಟೆಗಳನ್ನು ಅಂಟುಕೊಳ್ಳುತ್ತಿದ್ದುವು. ನಾವು ಮಾತನಾಡಿದಾಗ ನಮ್ಮ ದನಿ ಆ ಶಾಂತ ವಾತಾವರಣದಲ್ಲಿ ನೇತಾಡುತ್ತಿತ್ತು—ಇಡಿ ಈ ಜಗತ್ತಿನಲ್ಲಿ ನಾವಿಬ್ಬರೆ ಇದ್ದಂತೆ—ಇಬ್ಬರೆ ಆ ನೀಲಾಕಾಶದ ಗುಮ್ಮಟದ ಕೆಳಗೆ—ಸೂರ್ಯನ ಕಿರಣ ನಮ್ಮನ್ನು ಮುಟ್ಟದೆ ಮಿಂಚುತ್ತ ಮಿನಗುತ್ತ ಚನ್ನಾಟವಾಡುತ್ತಿದ್ದುವು.

ನಾನೂ ಅವರನ್ನು ನೀನು ಎಂದು ಕರೆಯಬೇಕೆಂದೆ, ಆದರೆ ನಾಚಿಕೆ ಸಾವೆನಿಸಿತು.

“ ನೀನು ಇಷ್ಟು ಅವಸರದಿಂದೇಕೆ ನಡೆದಿರುವೆ ? ” ಎಂದು ನಾನು ಕಿವಿಯಲ್ಲಿ ಗುಸಗುಟ್ಟಂತೆ ಭರ್ರನೆ ಕೇಳಿದೆ—ನಾಚಿಕೆಯಿಂದ ನನ್ನ ಮೋರೆ ಕೆಂಪೇರದಿರಲಿಲ್ಲ. ಅವರು ನಡಿಗೆಯನ್ನು ಮೆಲ್ಲರಿಸಿದರು—ನನ್ನೆಡೆಗೆದ ನೋಟದಲ್ಲಿ ಪ್ರೀತಿ, ಉಲ್ಲಾಸ ಮತ್ತು ಸುಖ ತುಂಬಿ ತುಳುಕುತ್ತಿತ್ತು.

ಮನೆಯಲ್ಲಿ ಅವರ ತಾಯಿ ಮತ್ತು ಕೆಲ ಜನ ಬರಲೆಬೇಕಾದ ಇಷ್ಟರಿದ್ದರು—ಆಗಲೆ ಬಂದು ಬಿಟ್ಟಿದ್ದರು—ಆಮೇಲೆ ನಾವು ನಿಕೊಲ್‌ಸ್ಕಿಗೆ ಹೋಗುವುದಕ್ಕಾಗಿ ದೇವಾಲಯದಿಂದ ಹೊರಬೀಳುವವರೆಗೆ ನಾನವರ ಜೊತೆಗೆ ಏಕಾಂತದಲ್ಲಿ ಉಳಿದಿರಲಿಲ್ಲ.

ದೇವಾಲಯವು ಬರಿಯದೆ ಆಗಿತ್ತು—ಸ್ತೋತ್ರಶಾಲೆಯ ಹತ್ತಿರವೆ ನಿಂತುಕೊಂಡ ಆವರ ತಾಯಿಯನ್ನು ಕಂಡೆ—ಕಾಟ್ಯಾ ಕೆಂಪು ಕಸಿಯ ಟೊಪ್ಪಿಗೆ ಧರಿಸಿದ್ದಳು—ಗಲ್ಲಗಳ ಮೇಲೆ ಕಣ್ಣೀರು ಸುರಿಯುತ್ತಿದ್ದುವು—ಒಬ್ಬಿಬ್ಬರು ಆಳು ಮನುಷ್ಯರು ಕುತೂಹಲದಿಂದ ನನ್ನೆಡೆಗೆ ನೋಡುತ್ತಿದ್ದರು. ನಾನವರೆಡೆಗೆ ನೋಡುತ್ತಿರಲಿಲ್ಲ—ಆದರೂ ಅವರ ಸಾಂನಿಧ್ಯ ನನ್ನ ಬದಿಯಲ್ಲಿ ನಾನು ಕಾಣುತ್ತಿದೆ. ನಾನು ಪ್ರಾರ್ಥನೆಯ ಶಬ್ದಗಳನ್ನು ಲಕ್ಷಕೊಟ್ಟು ಕೇಳಿದೆ, ಬಾಯಿಂದ ನುಡಿದೆ—ನನ್ನೆದೆಯಲ್ಲಿ ಎದುರುದನಿ ಹೊರಡಲಿಲ್ಲ. ಪ್ರಾರ್ಥನೆ ಮಾಡದಾಗಿ ಮೂರ್ತಿಗಳೆಡೆಗೆ ನೋಡಿದೆ—ಮಂಬತ್ತಿಗಳನ್ನು ನೋಡಿದೆ—ಅರ್ಚಕನ ತಲೆಯ ಟೊಪ್ಪಿಗೆಗಿದ್ದ ಕ್ರೂಸು, ತೆರೆ, ಕಿಟಕಿ—ಯಾವುದೂ ನನ್ನ ತಲೆಗೆ ಮುಟ್ಟಲಿಲ್ಲ. ನನಗೆ ಏನೊ ಒಂದು ವಿಚಿತ್ರ ಮಾಡುತ್ತಿರುವರೆಂದೆನಿ ಸುತ್ತಿತ್ತು. ಕೊನೆಗೆ ಅರ್ಚಕನು ಕ್ರೂಸ ತೆಗೆದುಕೊಂಡು ನಮ್ಮೆಡೆಗೆ ತಿರುಗಿದನು—ನಮ್ಮನ್ನಭಿನಂದಿಸಿದನು. "ನಾನು ನಿಮ್ಮ ನಾಮಕರಣ ಮಾಡಿದೆ—ದೇವರ ದಯೆ, ಈಗ ನಿಮ್ಮ ಮದುವೆ ಮಾಡಿದೆ." ಕಾಟ್ಯಾ ಮತ್ತು ಅವರ ತಾಯಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಮುತ್ತಿಟ್ಟರು—ಗ್ರಿಗೋರಿಯ ದನಿ ಕೇಳಬಂತು ಗಾಡಿಗಾಗಿ. ನನಗೆ ಭೀತಿ—ನಿರಾಶೆಯಾಯಿತು. ಎಲ್ಲವೂ ಮುಗಿದಂತಿತ್ತು—ನಾನು ಹೊಂದಿದ ಪವಿತ್ರವಾದ ವಿಧಿಗನುರೂಪವಾಗಿ ಯಾವುದೂ ವಿಶೇಷ—ಯಾವುದೂ ಬದಲಾಗಿರಲಿಲ್ಲ. ನಾವು ಒಬ್ಬರನ್ನೊಬ್ಬರು ಮುತ್ತಿಟ್ಟೆವು—ಮುತುಗಳಲ್ಲಿ ನಮ್ಮ ಭಾವನೆ ತೋರುವ ಶಕ್ತಿಯಿರಲಿಲ್ಲ. "ಇದೆಯೆ!" ನಾನು ಯೋಚಿಸಿದೆ. ನಾವು ದೇವಾಲಯದಿಂದ ಹೊರಬಿದ್ದೆವು. ಗುಮ್ಮಟದಲ್ಲಿ ಗಾಡಿಯು ಸಪ್ಪಳ ಗದರಿಸುತ್ತಿತ್ತು—ನನ್ನ ಮೋರೆಗೆ ಸುಳಿಗಾಳಿ ಬೀಸುತ್ತಿತ್ತು—ಅವರು ಟೊಪ್ಪಿಗೆ ಹಾಕಿಕೊಂಡು ನನ್ನನ್ನು ಗಾಡಿಯಲ್ಲಿ ಕುಳ್ಳಿರಿಸಿದರು. ಕಿಟಕಿಯಿಂದ ಕಣಕಟ್ಟದ ಮಂಜಿನ ಚಂದ್ರನನ್ನು ಕಂಡೆ. ಅವರು ನನ್ನ ಬಳಿ ಕುಳಿತು ಬಾಗಿಲ ಮುಚ್ಚಿದರು. ನನಗೆ ಒಮ್ಮೆಲೆ ನೋವು ಆದಂತೆನಿಸಿತು. ಅವರ ನಡೆನುಡಿಯಲ್ಲಿಯ ಅವಿಚಲತೆ ನೋಡಿ ನನಗೆ ಅಪಮಾನವಾದಂತೆನಿಸಿತು. ನಾನು ತಲೆಗೇನಾದರೂ ಹಾಕಿಕೊಳ್ಳಬೇಕೆಂದು ಕಾಟ್ಯಳೆಂದಳು; ಗಾಡಿಯ ಗಾಲಿಗಳು ಮೊದಲು ಕಲ್ಲುಗಳ ಮೇಲು ರುಳಿ ಮಿದು ದಾರಿಗೆ ಸಾಗಿದುವು—ನಾವು ಹೊರಟಂತಾಯಿತು. ಮೂಲೆ

ಯಲ್ಲಿ ಮುದುರಿಕೊಂಡು ಕುಳಿತು ನಾನು ದೂರದ ಭೂಮಿಗಳನ್ನೂ—ಆ ಚಂದ್ರನ ಬೆಳಕಿನಲ್ಲಿ ಹಿಂದುಳಿಯುವ ದಾರಿಯನ್ನೂ ನೋಡುತ್ತಿದ್ದೆ—ಅವರೆಡೆಗೆ ನೋಡದೆ ಅವರ ಸಾಂನಿಧ್ಯದ ಅರಿವಾಯಿತು ನನಗೆ. "ನಾನು ಹವಣಿಸಿ ನೋಡಿದ್ದೆಂದರೆ ಇದೆಯೆ?" ನಾನೆಂದುಕೊಂಡೆ. ಅವರ ಹತ್ತಿರ ಇಷ್ಟು ಸಮೀಪದಲ್ಲಿ ಏಕಾಂತದಲ್ಲಿ ಕುಳಿತುಕೊಳ್ಳುವುದು ಅಸಹ್ಯ ಮತ್ತು ಅಪಮಾನಕರವೆಂದೆನಿಸಿತು. ಮಾತನಾಡಬೇಕೆಂದು ಅವರೆಡೆಗೆ ತಿರುಗಿದೆ. ಶಬ್ದಗಳು ಹೊರಡಲಿಲ್ಲ. ನನ್ನ ಪ್ರೀತಿಯಳಿದು ಹೋಗಿ ಭೀತಿ ಮಾನಭಂಗಳಿಗೆ ಅನುವು ಕೊಟ್ಟಿತು.

"ಈ ಕ್ಷಣದ ವರೆಗೆ ಇದು ಶಕ್ಯವಿದ್ದೀತೆಂದು ನಾನು ನಂಬಿರಲಿಲ್ಲ." ನನ್ನ ನೋಟಕ್ಕೆ ಉತ್ತರವಾಗಿ ಅವರು ನುಡಿದರು.

"ನನಗೆ ಭಯವೆನಿಸುತ್ತಿದೆ" ನಾನೆಂದೆ.

"ನನ್ನ ಭಯ?" ಎಂದು ಬಾಗಿ ಅವರು ನನ್ನ ಕೈ ತಮ್ಮ ಕೈಯಲ್ಲಿ ತೆಗೆದುಕೊಂಡರು.

ನನ್ನ ಕೈ ಅವರ ಕೈಯಲ್ಲಿ ನಿರ್ಜೀವವಾಗಿ ಉಳಿದಿತ್ತು—ನನ್ನೆದೆಯಲ್ಲಿ ತಸಿವು ನೋವನ್ನುಂಟುಮಾಡುತ್ತಿತ್ತು.

"ಅಹುದು," ನಾನು ಗುಸಗುಟ್ಟಿ.

ನನ್ನೆದೆ ಆಗ ಭರದಿಂದ ಹಾರಲಾರಂಭಿಸಿತು—ನನ್ನ ಕೈ ನಡುಗಿ ನಾನವರ ಕೈ ಗಟ್ಟಿಯಾಗಿ ಹಿಡಿದೆ—ಮೈ ಕಾಯಿತು—ಆ ಅರೆಗತ್ತಲಲ್ಲಿ ಅವರ ಕಣ್ಣಿಗೆ ಕಣ್ಣು ಕೊಡಲೆಸಗಿದೆ—ಒಮ್ಮೆಲೆ ನಾನವರಿಗಂಜಿಲ್ಲವೆಂದೆನಿಸಿತು—ಈ ಭೀತಿ ಪ್ರೀತಿ ಆ ಹಳೆಯ ಪ್ರೀತಿಗಿಂತ ಬೇರೆಯಾದದ್ದು—ಹೆಚ್ಚು ಉತ್ಕಟವಾದದು. ನಾನು ಸರ್ವಸ್ವಿ ಅವರಾಧೀನಳಾದಂತೆನಿಸಿತು—ಅವರ ಅಧಿಕಾರದಲ್ಲಿ ನನಗೆ ಸುಖ.

# ಪರಿಚ್ಛೇದ ೬

ದಿನ, ವಾರ ಎಂದೆನ್ನುತ್ತ ಹಳ್ಳಿಗಾಡಿನಲ್ಲಿ ನಮ್ಮ ಏಕಾಂತವಾಸದ ಎರಡು ತಿಂಗಳುಗಳು ನಮ್ಮನ್ನರಿಯದೆ ಸರಾಗನೆ ಸಾಗಿದುವೆಂದೆನಿಸಿತು. ಆ ಎರಡು ತಿಂಗಳುಗಳಲ್ಲಿ ಆಯುಷ್ಯದಲ್ಲಿ ಮರೆಯಲಾಗದ ಭಾವ, ಭಾವನೆ, ಸುಖಗಳ ಅನುಭವ ದೊರೆಯಿತು. ನಾವು ನಿರ್ಧರಿಸಿದ ಆಯುಷ್ಯ ಕ್ರಮವು ಸಾಗಲಿಲ್ಲ. ದುಡಿತವಿಲ್ಲ, ಕರ್ತವ್ಯದ ಎಳೆತವಿಲ್ಲ, ತ್ಯಾಗವಿಲ್ಲ, ಹೆರವರಿಗಾಗಿ ಬಾಳಿ ಬದುಕುವುದಿಲ್ಲ—ಇದೆಲ್ಲವನ್ನು ನಾನು ಮದುವೆಯಾಗುವ ಮೊದಲು ಕಲ್ಪಿಸಿಕೊಂಡಿದ್ದೆ. ಅದರ ಬದಲು ನಮ್ಮಿಬ್ಬರಲ್ಲಿಯು ಪ್ರೀತಿ ಎಂಬ ಸ್ವಾರ್ಥ, ಪ್ರೀತಿಪಡಿಸಿಕೊಳ್ಳುವ ಲವಲವಿಕೆ, ನಿರಂತರವಾದ ಕಾರಣವಿಲ್ಲದ ಉಲ್ಲಾಸ, ಇಡಿ ಜಗತ್ತಿನ ಬಗೆಗೆ ಮರೆವು. ನಿಜವಾಗಿಯೂ ನನ್ನ ಪತಿ ತಮ್ಮ ಓದು ಬರೆಹಕ್ಕಾಗಿ ತಮ್ಮ ಕೋಣೆಗೆ ಹೋಗುತ್ತಿದ್ದರ ಕೆಲಸದ ನಿಮಿತ್ತ ಪಟ್ಟಣಕ್ಕೆ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದರು, ಇಲ್ಲವೆ ಆಸ್ತಿಯ ವ್ಯವಸ್ಥೆ ನೋಡುವು ದಕ್ಕಾಗಿ ಅಲ್ಲಲ್ಲಿ ಹೋಗಿ ಬರುತ್ತಿದ್ದರು, ಆದರೆ ನನ್ನನ್ನು ಬಿಟ್ಟು ದೂರವಿರುವು ದೆಂದರೆ ಎಷ್ಟು ಪ್ರಯಾಸವಾಗುತ್ತಿತ್ತೆಂಬದು ನನಗೇ ಗೊತ್ತು. ನನಗೂ ಹಾಗೆ. ಮುಂದೆ ಎಂದೊ ಒಂದು ದಿನ ಅವರು ನನ್ನೆದುರಿಗೊಪ್ಪಿಕೊಂಡರು, ನಾನಿಲ್ಲದಾಗ ಯಾವುದೆ ಕೆಲಸ ಅರ್ಥವಿಲ್ಲದ್ದು - ಅದರಲ್ಲಿ ಮನಸೆ ಉಳಿಯು ತ್ತಿರಲಿಲ್ಲವೆಂದು ನಾನು ಓದುವುದಾಯಿತು, ಪಿಯಾನೊ ನುಡಿಸುವುದಾ ಯಿತು. ಅವರ ತಾಯಿಯ ಜೊತೆಯಲ್ಲಿ ಕಾಲ ಕಳೆಯುವುದಾಯಿತು, ಶಾಲೆ ಯಲ್ಲಿ ಕಲಿಸುವುದಾಯಿತು ಅವರಿಗೆ ಸಂಬಂಧಿಸದ ಅವರ ಒಪ್ಪಿಗೆಗೆಯಿದ್ದ ಕೆಲಸಗಳೆಂದು ಮಾಡತೊಡಗಿದ್ದೆ. ಯಾವುದಾದರೊಂದು ಕರ್ತವ್ಯ ಅವ ರನ್ನು ಬಿಟ್ಟಿದ್ದರೆ ನನ್ನ ಕೈಯೇಳುತ್ತಿರಲಿಲ್ಲ—ಅವರನ್ನು ಬಿಟ್ಟೇನಾದರೂ ಇದ್ದೀತೆಂದು ಯೋಚಿಸುವುದು ಶಕ್ಯವಿತ್ತು. ಇದು ಸ್ವಾರ್ಥಮಯ—ತಪ್ಪು ಭಾವನೆ ಇದ್ದೀತು—ಆದರೆ ಅದು ನನ್ನನ್ನು ಜಗತ್ತಿನಲ್ಲಿ ಒಂದು ಹೆಚ್ಚಿನ ಸ್ಥಾನಕ್ಕೇರಿಸಿ ಸುಖ ಕೊಡುತ್ತಿತ್ತು. ಜಗತ್ತಿನಲ್ಲಿ ನನಗಾಗಿ ಅವರೊಬ್ಬರೆ— ಅವರೆಂದರೆ ಅತಿ ಶ್ರೇಷ್ಠರೂ ದೋಷವಿಹೀನರೆಂದು ನಾನು ತಿಳಿದುಕೊಂಡಿದ್ದೆ. ನಾನು ಕೇವಲ ಅವರಿಗಾಗಿಯೆ ಇದ್ದೆ—ನನ್ನ ಬಗೆಗಿದ್ದ ಅವರ ಕಲ್ಪನೆಗನುಗು

ಣವಾಗಿ ಇರಬೇಕಿತ್ತು. ಅವರ ದೃಷ್ಟಿಯಿಂದ ನಾನು ಜಗತ್ತಿನಲ್ಲಿಯ ಒಬ್ಬ ಶ್ರೇಷ್ಠಳಾದ ಹೆಂಗಸಾಗಿದ್ದೆ-ಎಲ್ಲ ಗುಣಗಳನ್ನುಳ್ಳಾಕೆಯಾಗಿದ್ದೆ. ಜಗತ್ತಿನಲ್ಲಿಯ ಶ್ರೇಷ್ಠರಾದವರ ಅಭಿಮತದಂತೆ ಇದ್ದ ಆ ಹೆಂಗಸು ನಾನಾಗಿರತಕ್ಕದ್ದಿತ್ತು.

ಒಂದು ದಿನ ಅವರು ನನ್ನ ಕೋಣೆಗೆ ನಾನು ಪ್ರಾರ್ಥನೆ ಮಾಡುವಾಗ ಬಂದರು. ನಾನವರೆಡೆಗೆ ನೋಡಿದೆ—ನನ್ನ ಪ್ರಾರ್ಥನೆ ಮುಂದೆ ಸಾಗಿಸಿದೆ. ನನಗೆ ವ್ಯತ್ಯಾಸ ಕೊಡಬಾರದೆಂದು ಅವರು ಮೇಜಿನ ಹತ್ತಿರ ಕುಳಿತುಕೊಂಡು ಒಂದು ಪುಸ್ತಕವನ್ನು ತೆರೆದರು. ಅವರು ನನ್ನೆಡೆಗೆ ನೋಡುವರೆಂದು ತಿಳಿದು ನಾನು ತಿರುಗಿ ನೋಡಿದೆ ಅವರು ನಸುನಕ್ಕರು—ನಾನೂ ನಕ್ಕೆ—ಪ್ರಾರ್ಥನೆಯನ್ನು ನಿಲ್ಲಿಸಬೇಕಾಯಿತು.

"ನೀವು ಪ್ರಾರ್ಥನೆ ಮುಗಿಸಿದಿರೇನು?" ನಾನು ಕೇಳಿದೆ.

"ಹೋ!—ನೀನು ಸಾಗಿಸು; ನಾನು ಹೋಗುವೆನು."

"ನೀವು ಪ್ರಾರ್ಥನೆಯನ್ನು ಪಠನ ಮಾಡುವಿರೆಂದು ತೋರುತ್ತಿದೆ!"

ಅವರು ಉತ್ತರ ಕೊಡಲಿಲ್ಲ—ಕೋಣೆ ಬಿಟ್ಟು ಹೋಗತೊಡಗಿದರು—ನಾನೆ ನಿಲ್ಲಿಸಿದೆ.

"ದಯವಿಟ್ಟು ನನ್ನ ಜೊತೆಗೆ ಸ್ತೋತ್ರವನ್ನು ಹೇಳಿರಿ." ಅವರು ನನ್ನ ಹತ್ತಿರ ನಿಂತರು—ಕೈ ಎತ್ತಾದರೂ ಹಿಡಿದರು—ತಡವರಿಸುತ್ತ. ಗಂಭೀರತೆಯಿಂದ ಸ್ತೋತ್ರವನ್ನಾರಂಭಿಸಿದರು. ನಡುನಡುವೆ ನನ್ನೆಡೆಗೆ ಮೋರೆ ತಿರುವಿ ನೋಡುತ್ತಿದ್ದರು ನನ್ನ ಮೋರೆಯ ಮೇಲೆ ಒಪ್ಪಿಗೆ ಸಹಾಯ್ಯಗಳ ಚಿನ್ಹೆಗಳು ಕಾಣುವವೋ ಏನೊ ಎಂದು.

ಎಲ್ಲ ಮುಗಿದ ನಂತರ ನಾನು ನಕ್ಕೆ—ಅವರನ್ನಪ್ಪಿಕೊಂಡೆ—

"ನಾನು ಹತ್ತು ವರ್ಷದವನಿದ್ದಂತೆನಿಸುತ್ತಿದೆ! ನೀನು ಈ ಚಮತ್ಕಾರವನ್ನು ಮಾಡಿರುವಿ!" ಅವರೆಂದರು—ನನ್ನ ಕೈಗೆ ಮುತ್ತಿಟ್ಟರು ನಾಚುತ್ತ.

"ನಮ್ಮ ಮನೆ—ಹಳ್ಳಿಗಾಡಿನಲ್ಲಿಯ ಹಳೆಯ ತರದ ಮನೆ—ಎಷ್ಟೊ ಪೀಳಿಗೆಗಳು ಅಲ್ಲಿದ್ದು ಮರ್ಯಾದೆಯಿಂದ ಜೀವನ ಸಾಗಿಸಿದ್ದುವು—ಪ್ರೀತಿಯ ಜೀವನ ನೋಡಿದ್ದುವು. ಮನೆತನದ ಒಳ್ಳೆಯ ಪರಂಪರೆ—ಮನೆ ಹೊಕ್ಕ

ಕೂಡಲೆ ಅದು ನನ್ನದೂ ಆಯಿತು. ಮನೆಯ ವ್ಯವಸ್ಥೆ ಹಳೆಯ ಪದ್ಧತಿಯ ಪ್ರಕಾರ ನಮ್ಮ ಅತ್ತೆ ಟಾಟ್ಯಾನಾಸಿಮ್ಯೊನೊವ್ನಳಿಂದ ಸಾಗಿಸಲ್ಪಟ್ಟಿತ್ತು. ಚೆಂದಚಾರ ಅದರಲ್ಲೇನಿರಲಿಲ್ಲ. ಆಳು ಹೋಳುಗಳನ್ನು ಮೊದಲ್ಗೊಂಡು ಕುರ್ಚಿ ಮೇಜು ಊಟ ಉಡಿಗೆಯವರೆಗೆ ಎಲ್ಲದರಲ್ಲಿ ಸಮೃದ್ಧಿ—ಸಮೀಚಿನತೆ ಯಿತ್ತು-ಎಲ್ಲವೂ ಜಳಜಳ, ಬಾಳಿಕೆಯದು, ಅಚ್ಚುಕಟ್ಟು-ಆದರವನ್ನುಂಟು ಮಾಡುತ್ತಿತ್ತು. ದಿವಾಣಖಾನೆಯಲ್ಲಿ ಕುರ್ಚಿ ಮೇಜುಗಳನ್ನಿಟ್ಟ ರೀತಿಯಲ್ಲಿ ಸಂಯೋಜಕತೆಯಿತ್ತು—ಗೋಡೆಗೆ ಭಾವ ಚಿತ್ರಗಳಿದ್ದುವು. ನೆಲದ ಮೇಲೆ ಮನೆಯಲ್ಲಿಯೆ ಮಾಡಿದ ಗುಡಾರ ಚಾಪೆಗಳನ್ನು ಹಾಸಿತ್ತು. ಮುಂಜಾನೆ ಕುಳಿತುಕೊಳ್ಳುವ ಕೋಣೆಯಲ್ಲಿ ಒಂದು ಹಳೆಯ ಪಿಯಾನೊ ಇತ್ತು-ಎರಡು ಬೇರೆ ಬೇರೆ ಮಾದರಿಯ ಮರಗಳಿದ್ದುವು. ಸೋಫಾಗಳಿದ್ದುವು—ಕೆತ್ತನೆಯ ಟೇಬಲ್ಲುಗಳು—ಅವುಗಳ ಮೇಲೆ ಪಂಚರಸದ ಸಾಮಾನುಗಳು. ನಾನು ಕುಳಿತುಕೊಳ್ಳುವ ಕೋಣೆ ಟಾಟ್ಯಾನಾಸಿಮ್ಯೊನೊವ್ನಳೆ ಸಜ್ಜು ಮಾಡಿದ್ದಳು-ಎಲ್ಲಕ್ಕೂ ಹೆಚ್ಚು ಸುಂದರವಿದ್ದ ಕುರ್ಚಿ ಮೇಜುಗಳಿಂದ ತುಂಬಿತ್ತು--ಅವುಗಳಲ್ಲಿ ಬೇರೆ ಬೇರೆ ಕಾಲದ ಬೇರೆ ಬೇರೆ ರೀತಿಯಿತ್ತು-ಒಂದು ಕನ್ನಡಿಯಂತೂ ಮೊದಲು ನೋಡುವುದಕ್ಕೆ ಅಂಜಿಕೆಯಾಗುತ್ತಿತ್ತು—ಅದನ್ನು ನನ್ನ ಗೆಳತಿ ಯಂತೆ ಪ್ರೀತಿಸಲಾರಂಭಿಸಿದೆ. ಟಾಟ್ಯಾನಾಸಿಮ್ಯೊನೊವ್ನಳ ದನಿ ಕೇಳಬರ ದಿದ್ದರೂ ಮನೆಗೆಲಸ ಯಂತ್ರದಂತೆ ಸಾಗಿತ್ತು ಆಳು ಹೋಳುಗಳ ಸಂಖ್ಯೆ ಮಿತಿಮೀರಿತ್ತು. ( ಅವರ ಬೂಟುಗಳಿಗೆ ಹಿಮ್ಮಡವಿರಲಿಲ್ಲ—ಟಾಟ್ಯಾನಾಸಿ ಮ್ಯೊನೊವ್ನಳಿಗೆ ಅಪ್ಪಳಿಸುವ ಹಿಮ್ಮಡಗಳೂ ಚರಗುಡುವ ಅಟ್ಟೆಗಳೆಂದರೆ ಆಗುತ್ತಿರಲಿಲ್ಲ)-ಆಳುಗಳಿಗೆ ತಮ್ಮ ವ್ಯವಸಾಯದ ಬಗೆಗೆ ಅಭಿಮಾನವಿತ್ತು-ಹಿರಿಯ ಒಡತಿಯೆದುರಿಗೆ ನಡುಗುತ್ತಿದ್ದರು—ನನ್ನ ಪತಿಯನ್ನೂ ನನ್ನನ್ನೂ ಪ್ರೀತಿಸುತ್ತಿದ್ದರೂ ಮೇಲ್ನೋಟದಿಂದ ನೋಡುತ್ತಿದ್ದರು—ತಮ್ಮ ತಮ್ಮ ಕೆಲಸಗಳನ್ನು ತೋರಿಕೆಗಂತೂ ಸಮಾಧಾನದಿಂದ ಮಾಡುತ್ತಿದ್ದರು. ಪ್ರತಿ ಶನಿ ವಾರ ನೆಲ ಸಾರಿಸುವುದೂ ಗುಡಾರ ಜಾಡಿಸುವುದೂ ಇದ್ದೆ ಇರುತ್ತಿತ್ತು. ಪ್ರತಿ ತಿಂಗಳ ಮೊದಲನೆಯ ದಿನ ಪ್ರಾರ್ಥನೆ ತೀರ್ಥದಿಂದ ಚಿಮ್ಮಡಿಸುವುದೂ ಇರುತ್ತಿತ್ತು. ಪ್ರತಿಸಲ ಟಾಟ್ಯಾನಾಸಿಮ್ಯೊನೊವ್ನಳ ಮತ್ತು ಆಕೆಯ ಮಗನ ನಾಮಕರಣದ ದಿನ ( ಈ ಚಳಿಗಾಲದಿಂದ ನನ್ನ ನಾಮಕರಣದ ದಿನವೂ)

ನೆರೆಹೊರೆಯವರಿಗೆ ಊಟವಿರುತ್ತಿತ್ತು. ಟಾಟ್ಯಾನಾಸಿವ್ಯೋನೊವ್ನಳ ಜನ್ಮ ದಾರಭ್ಯ ಈ ಕ್ರಮ ತಡೆಯಿಲ್ಲದೆ ಸಾಗಿತ್ತು.

ನನ್ನ ಪತಿ ಮನೆಯ ವ್ಯವಸ್ಥೆಯಲ್ಲಿ ಕೈಹಾಕುತ್ತಿರಲಿಲ್ಲ—ಹೊಲದ ವ್ಯವಸ್ಥೆ, ಆಳುಹೋಳು ನೋಡುತ್ತಿದ್ದರು—ಅದಕ್ಕೆ ಹೆಚ್ಚು ಕಾಲ ಕಳೆಯು ತ್ತಿದ್ದರು. ಚಳಿಗಾಲದಲ್ಲಿ ಕೂಡ ಅವರು ನಸುಕಿನಲ್ಲಿ ಎದ್ದು ಹೋಗುತ್ತಿ ದ್ದರು—ನಾನು ಎಚ್ಚತ್ತಾಗ ಅವರು ಎದ್ದು ಹೋಗಿರುತ್ತಿದ್ದರು. ಚಹಾಕ್ಕೆ ಬರುತ್ತಿದ್ದರು—ನಾವಿಬ್ಬರೆ ಕುಡಿಯುತ್ತಿದ್ದೆವು. ಹೊಲದ ಕೆಲಸದಲ್ಲಿಯ ತೊಂದರೆಗಳು ಮುಗಿದ ನಂತರ ಅವರು ಆನಂದದಲ್ಲಿರುತ್ತಿದ್ದರು—ಅದಕ್ಕೆ ನಾವು "ನಿರತಿಶಯ ಆನಂದ" ಎಂದೆನ್ನುತ್ತಿದ್ದೆವು. ಬೆಳಗಿನಿಂದ ತಾವೇ ನೇನು ಕೆಲಸ ಮಾಡಿದರು ಬಿಟ್ಟರೆಂಬುದರ ಸುದ್ದಿಯನ್ನು ಒಮ್ಮೊಮ್ಮೆ ಹುಚ್ಚು ಚ್ಚಾರ ಹೇಳುತ್ತಿದ್ದರು—ಕಣ್ಣಲ್ಲಿ ನೀರು ಬರುವವರೆಗೆ ನಾವು ನಗುತ್ತಿದ್ದೆವು. ಒಮ್ಮೊಮ್ಮೆ ನಾನೆ ನಿಜವಾದ ಸುದ್ದಿ ಹೇಳಲಿಕ್ಕೆ ಆಗ್ರಹ ಮಾಡಿದಾಗ ಅವರು ನಗೆ ಬಿಗಿಹಿಡಿದು ಎಲ್ಲವನ್ನು ಹೇಳುತ್ತಿದ್ದರು. ನಾನು ಅವರ ಕಣ್ಣು, ತುಟಿ ಗಳನ್ನು ಕಂಡರೂ ನನಗೆ ಯಾತರ ಅರ್ಥವೂ ಆಗುತ್ತಿರಲಿಲ್ಲ. ಅವರ ದರ್ಶನ, ಅವರ ದನಿ ಎಂದರೆ ನನಗೆ ಸುಖ.

"ನಾನೇನು ಹೇಳುತ್ತಿರುವೆನು? ಇನ್ನೊಮ್ಮೆ ಹೇಳು ನೋಡೋಣ" ಎಂದು ಒಮ್ಮೊಮ್ಮೆ ನುಡಿಯುತ್ತಿದ್ದರು. ನನಗೇನೂ ಹೇಳಲಿಕ್ಕೆ ಬರುತ್ತಿರ ಲಿಲ್ಲ. ನಮ್ಮ ವಿಷಯವನ್ನೊಂದು ಬಿಟ್ಟು ಅವರು ನನಗೆ ಮತ್ತೇನಾದರೂ ಹೇಳುವುದೆ ಮರುಳತನವೆನಿಸುತ್ತಿತ್ತು. ಜಗತ್ತಿನಲ್ಲಿ ಏನಾದರೂ ಆದರೂ ನಮಗದರ ಗೊಡವೆಯೆ! ಮುಂದೆ ಎಂದೊ ನಾನು ಅವರ ಕೆಲಸಗಳಲ್ಲಿ ತುಸು ಮಟ್ಟಿಗೆ ಮನಸು ಹಾಕತೊಡಗಿದೆ. ಟಾಟ್ಯಾನಾಸಿವ್ಯೋನೊವ್ನಳು ಭೋಜ ನಕ್ಕೆ ಮೊದಲು ಕಣ್ಣಿಗೆ ಬೀಳುತ್ತಿರಲಿಲ್ಲ. ಪ್ರತಿನಿಧಿಯ ಮುಖಾಂತರವೆ ನಮ್ಮ ಸಮಾಚಾರ ತೆಗೆದುಕೊಳ್ಳುತ್ತಿದ್ದಳು. ಸುಖಕ್ಕೇ ಮೀಸಲಾದ ನಮ್ಮ ಆ ಜಗತ್ತಿನಲ್ಲಿ ಆಕೆಯಿದ್ದ ನಿಯಮಬದ್ಧ ಪ್ರದೇಶದಿಂದ ಬಂದ ಆ ದನಿ ನಮ್ಮನ್ನು ಕಾತರಗೊಳಿಸುತ್ತಿತ್ತು ತೊತ್ತು ನನ್ನೆದುರಿಗೆ ಬಂದು ನಿಂತು ಕೈ ಜೋಡಿಸಿ ಪರಿಷ್ಕಾರದಿಂದ "ನಿನ್ನೆಯ ಸಂಜೆಗೆ ಓಡಾಡಿ ಬಂದ ನಂತರ ತಮಗೆ ನಿದ್ರೆ ಹೇಗೆ ಹತ್ತಿತ್ತೆಂದು ದೊರೆಸಾನಿಯವರು ಕೇಳಿಕೊಳ್ಳಲಿಕ್ಕೆ ಹೇಳಿ

ರುವರು ಅವರ ಬಗೆಗೆ ಹೇಳುವುದೆಂದರೆ ರಾತ್ರಿ ಎಲ್ಲ ಪಕ್ಕದಲ್ಲಿ ನೋವಿತ್ತು, ಊರಲ್ಲಿಯ ಖೋಡಿ ನಾಯಿಯೊಂದು ಬೊಗಳೇ ಬೊಗಳಿದ್ದರಿಂದ ಎಚ್ಚತ್ತು ಕಾಲ ಕಳೆಯಬೇಕಾಯಿತ. ಬೆಳಿಗ್ಗೆ ಕೊಟ್ಟ ರೊಟ್ಟಿ ತಮಗೆ ಸೇರಿತೊ ಇಲ್ಲವೊ ಎಂತಲೂ ಕೇಳಲಿಕ್ಕೆ ಹೇಳಿರುವರು—ಇಂದು ತಾರಾಸನು ರೊಟ್ಟಿ ಮಾಡಿಲ್ಲ-ನಿಕೊಲೊಪ್ಪನು ಇಂದೆ ಮೊದಲು ರೊಟ್ಟಿ ಮಾಡಲಿಕ್ಕೆ ಕುಳಿತದ್ದು-ಆತನ ಅಡಿಗೆ ಕೆಟ್ಟದ್ದಲ್ಲ—ವಿಶೇಷವಾಗಿ ಬಿಚ್ಚುಕಡುಬು ಚೆನ್ನಾಗಿವೆ—ಅರಳು ಗಳು ಹೊತ್ತಿದ್ದುವಷ್ಟೆ. " ಭೋಜನಕ್ಕೆ ಮೊದಲು ನಾವು ಒಬ್ಬರನ್ನೊಬ್ಬರು ಕಾಣುತ್ತಿರಲಿಲ್ಲ. ಅವರು ಪತ್ರ ಬರೆಯುತ್ತಿದ್ದರೊ, ನಾನು ಪುಸ್ತಕ ಓದು ತ್ತಿದ್ದೆನೊ, ಪಿಯಾನೊ ನುಡಿಸುತ್ತಿದ್ದೆನೊ ಅವರು ಹೊರಗೆ ಹೋಗುತ್ತಿದ್ದರು. ನಾಲ್ಕು ಘಂಟೆಗೆ ಮಾತ್ರ ನಾವೆಲ್ಲರೂ ಕೂಡುತ್ತಿದ್ದೆವು. ಟಾಟ್ಯಾನಾ ಸಿಮ್ಯೊನೊವ್ನಳು ತನ್ನ ಕೋಣೆಯಿಂದ ಹೊರಬೀಳುತ್ತಿದ್ದಳು—ಮನೆಯಲ್ಲಿ ಆಗಾಗ ಇಬ್ಬರು ಮೂರು ಜನ ಬಡ ಹೆಣ್ಣುಮಕ್ಕಳು-ಧರ್ಮಿಷ್ಠ ಕುಮಾರಿಯವರು-ಪ್ರತಿ ದಿನ ನನ್ನ ಪತಿ ತಮ್ಮ ತಾಯಿಗೆ ಕೈ ಕೊಡುತ್ತಿದ್ದರು ರೂಢಿಯಂತೆ ಭೋಜನಕ್ಕೆ ಹೋಗುವಾಗ—ಆದರೆ ನಾನು ಎರಡನೆಯ ಕೈ ಹಿಡಿದುಕೊಳ್ಳ ಬೇಕೆಂದು ಆಕೆಯ ಆಗ್ರಹ—ಪ್ರತಿ ದಿನ ನಾವು ಬಾಗಿಲಲ್ಲಿ ಸಿಲುಕಿ ಒಬ್ಬರ ಕಾಲಲ್ಲಿ ಒಬ್ಬರು ತೊಡಕು ಬೀಳುತ್ತಿದ್ದೆವು. ಭೋಜನದ ಕಾಲಕ್ಕೆ ಮುಖ್ಯ ಸ್ಥಾನಕ್ಕೆ ಆಕೆ—ಸಂಭಾಷಣೆಯೂ ಒಳ್ಳೆಯ ಗಾಂಬೀರ್ಯ, ತಾರತಮ್ಯ ರೀತಿ ಭಾತಿಗಳಿಂದ ಸಾಗುತ್ತಿತ್ತು. ಈ ಆಮೋದ ಪ್ರಮೋದಗಳ ಔಚಿತ್ಯದಲ್ಲಿ ನಮ್ಮಿಬ್ಬರ ತೀರ ಸಾಮಾನ್ಯವಾದ ವಿಷಯಗಳು ಮೋಜು ಮಾಡುತ್ತಿದ್ದುವು. ಒಮ್ಮೊಮ್ಮೆ ಆ ತಾಯಿ ಮಕ್ಕಳಲ್ಲಿ ವಾದ ಹುಟ್ಟುತ್ತಿತ್ತು—ಮಾತಿಗೆ ಮಾತು ಬೆಳೆಯುತ್ತಿತ್ತು. ಈ ಪ್ರಸಂಗಗಳು ಒಳ್ಳೆಯ ಮೋಜಿನವಿರುತ್ತಿದ್ದುವು—ಆ ಇಬ್ಬರನ್ನು ಬಂಧಿಸುವ ಪ್ರೀತಿಯ ಕುರುಹುಗಳಿರುತ್ತಿದ್ದುವವು. ಭೋಜ ನದ ನಂತರ ಟಾಟ್ಯಾನಾ ನಡುಮನೆಗೆ ಹೋಗುತ್ತಿದ್ದಳು—ಅಲ್ಲಿ ಕುಳಿತು ಕೊಂಡು ತನ್ನ ನಸ್ಯವನ್ನು ಮಿದ್ದುವುದಾಯಿತೊ, ಹೊಸ ಪುಸ್ತಕಗಳ ಪುಟಗಳ ನ್ನುಚ್ಚುವುದೊ ಮಾಡುತ್ತಿದ್ದಳು. ನಾವೊ ಪುಸ್ತಕಗಳನ್ನು ಗಟ್ಟಿಯಾಗಿ ಓದು ತ್ತಿದ್ದೆವೊ, ದಿವಾಣಖಾನೆಯಲ್ಲಿದ್ದ ಪಿಯಾನೋದೆಡೆಗೆ ಹೋಗುತ್ತಿದ್ದೆವೊ. ಈ ಕಾಲಕ್ಕೆ ನಾವು ಬಲು ಓದುತ್ತಿದ್ದೆವು—ಆದರೂ ಸಂಗೀತವೆ ನಮ್ಮ ಮುಖ್ಯ

ವಾದ ಮನರಂಜನೆಯಾಗಿತ್ತು—ಅದು ನಮ್ಮ ಹೃದಯದಲ್ಲಿ ಹೊಸ ಹೊಸ ತಂತಿಯನ್ನು ಮಿಡಿದು ಒಬ್ಬರಿಗೊಬ್ಬರನ್ನು ಅರಿಕೆ ಮಾಡುತ್ತಿತ್ತು. ನಾನು ಅವರ ಪ್ರೀತಿಯ ಗೀತಿಗಳನ್ನು ನುಡಿಸುವಾದ ಮೇಲೆ ಅವರೊಂದು ದೂರದ ಸ್ಥಳದಲ್ಲಿ ನನಗೆ ಕಾಣದಂತೆ ಕುಳಿತಿರುತ್ತಿದ್ದರು. ಆ ಸಂಗೀತದಿಂದ ತಮ್ಮಲ್ಲಿ ಹುಟ್ಟಿದ ಭಾವಗಳನ್ನು ಹೊರದೋರಲು ಅವರಿಗೆ ನಾಚಿಕೆ. ನಾನು ಅನಿರೀಕ್ಷಿತವಾಗಿ ಅವರ ಹತ್ತಿರ ಹೋಗಿ ನಿಂತು ಅವರ ಮುಖದ ಮೇಲಿನ ಭಾವಗಳನ್ನು ಕಂಡುಕೊಳ್ಳಬೇಕೆಂದು ಯತ್ನಿಸುತ್ತಿದ್ದೆ—ಆದರೊ ಆ ಕಣ್ಣಲ್ಲಿಯ ಹೊಳಪನ್ನೊ ನೀರನ್ನೊ ಮುಚ್ಚುಮರಿ ಮಾಡುವುದಕ್ಕೆ ಮೊದಲು ಮಾಡುತ್ತಿದ್ದರು. ಟಾಟ್ಯಾನಾ ಸಿಮ್ಯೊನೊವ್ನಳು ನಮ್ಮನ್ನು ಹಾಗೆ ಕುಳಿತುಕೊಂಡಾಗ ನೋಡಬಯಸಿದವಳು ನಿರ್ಬಂಧಗಳನ್ನಾವನ್ನೂ ನಿರ್ಮಾಣ ಮಾಡುತ್ತಿರಲಿಲ್ಲ ಒಳ್ಳೆಯ ಕೆಲಸದಲ್ಲಿ ತೊಡಗಿದಂತೆ ನಮ್ಮನ್ನು ನೋಡಿಯೂ ನೋಡದಂತೆ ಹತ್ತಿರದಿಂದ ಕೋಣೆಯಿಂದ ಆಕೆ ಹಾಯ್ದು ಹೋಗುತ್ತಿದ್ದಳು. ಸಂಜೆಗೆ ದಿವಾಣಖಾನೆಯಲ್ಲಿ ಚಹಾ ಮಾಡುತ್ತಿದ್ದೆ–ಆಗ ಮನೆಯ ಜನರೆಲ್ಲರೂ ಒಟ್ಟು ಕೂಡುತ್ತಿದ್ದರು. ಸ್ವಚ್ಛವಾಗಿ ತಿಕ್ಕಿಟ್ಟ ಚಹಾದ ಪಾತ್ರೆಯನ್ನಿಟ್ಟುಕೊಂಡು ಕಪ್ಪಗಳಲ್ಲಿ ಗ್ಲಾಸುಗಳಲ್ಲಿ ಚಹಾ ತುಂಬಿ ತುಂಬಿ ಕೊಡುವುದೆಂದರೆ ಎಷ್ಟೊ ದಿನಗಳ ವರೆಗೆ ಜೀವದ ಸುತ್ತ ಬರುತ್ತಿತ್ತು. ಆ ಮಾನಕ್ಕೆ ಅಪಾತ್ರಳೊ—ಆ ದೊಡ್ಡ ಪಾತ್ರೆಯಿಂದ ಚಹಾ ಸುರುವುವುದಕ್ಕೂ ನಿಕಿಟಾನ ತಟ್ಟೆಯಲ್ಲಿ ಗ್ಲಾಸುಗಳನ್ನಿಡುವುದಕ್ಕೂ–ಇನ್ನೂ ಚಿಕ್ಕವಳೊ ಪೋಕರಿಯೊ ಎಂದೆನಿಸುತ್ತಿತ್ತು—"ಪೀಟರ ಇಫಾನಿಶ್ನಸಿಗಿದು" "ಇದು ಮಾರ್‍ಯಾ ಮಿನಿಶ್ನಳಿಗೆ" ಎಂದು ಹೇಳುವುದು—"ಸಕ್ಕರೆ ಸರಿಯಾಗಿದೆಯೆ ?" ಎಂದು ಕೇಳುವುದು–ದಾದಿ ಮತ್ತು ಕೆಲವರಿಗಾಗಿ ಸಕ್ಕರೆಯ ವಡಿಗಳನ್ನಿಡುವುದು—'ಎಂಥ ಮೋಜು! ಮೋಜು! ಒಳ್ಳೆಯ ಹಿರಿಯರಂತೆ ನಡೆದಿದೆ' ಎಂದು ನನ್ನ ಪತಿಯು ಅಭಿಪ್ರಾಯಪಟ್ಟಾಗ ನನ್ನ ಮನಸಿನ ಗೊಂದಲವು ಹೆಚ್ಚುತ್ತಿತ್ತು.

ಚಹಾ ಮುಗಿದ ನಂತರ ಟಾಟ್ಯಾನಾಸಿಮ್ಯೊನೊವ್ನಳು ಇಸ್ಪೇಟು ತೆಗೆದುಕೊಂಡು ವೈಕುಂಠದಾಟ ಆಡುತ್ತಿದ್ದಳೊ ಇಸ್ಪೇಟಿನಿಂದ ಮಾರ್‍ಯಾಮಿನಿಶ್ನಳು ಭವಿಷ್ಯ ಹೇಳುತ್ತಿದ್ದಳದನ್ನು ಕೇಳುತ್ತಿದ್ದಳೊ, ಆಮೇಲೆ ಆಕೆ ನಮ್ಮನ್ನು ಮುತ್ತಿಟ್ಟು ಕ್ರೂಸು ಮುಟ್ಟಿಸಿ ಆಶೀರ್ವದಿಸುತ್ತಿದ್ದಳು—ನಾವೊ ನಮ್ಮ

ಕೋಣೆಗೆ ಹೋಗುತ್ತಿದ್ದೆವು. ನಾವು ಮಧ್ಯ ರಾತ್ರಿಯವರೆಗೆ ಕುಳಿತುಕೊಂಡು ನಮ್ಮ ಆಯುಷ್ಯದಲ್ಲಿಯ ಉತ್ತಮ ವೇಳೆ ಕಳೆಯುತ್ತಿದ್ದೆವು. ಅವರು ತಮ್ಮ ಗತ ಜೀವನದ ಸುದ್ದಿ ಹೇಳುತ್ತಿದ್ದರು; ನಾವು ಮುಂದಿನ ಕಾರ್ಯಕ್ರಮವನ್ನು ನಿಶ್ಚಯಿಸುತ್ತಿದ್ದೆವು—ತತ್ತ್ವಜ್ಞಾನವನ್ನು ಕೂಡ ಚರ್ಚಿಸುತ್ತಿದ್ದೆವು. ನಾವು ಮೆಲ್ದನಿಯಿಂದಲೆ ಮಾತನಾಡಲೆಸಗುತ್ತಿದ್ದೆವು- ಅಟ್ಟದ ಮೇಲಿದ್ದ ಟಾಟ್ಯಾನಾ ಸಿಮ್ಯೊನೊವ್ನಳಿಗೆ ಕೇಳಿಸೀತೆಂಬ ಭಯ—ಆಕೆ ನಮಗೆ ಬೇಗನೆ ಮಲಗುವು ದಕ್ಕೆ ಹೇಳುತ್ತಿದ್ದಳು. ಒಮ್ಮೊಮ್ಮೆ ನಾವು ಹಸಿಯುತ್ತಿದ್ದೆವು—ಆಮೇಲೆ ನಾವು ಮೆಲ್ಲಗೆ ಅಡಿಗೆಯ ಕೋಣೆಗೆ ಹೋಗಿ ನಿಕಿಟನ ಸಾಹಾಯ್ಯದಿಂದ ಆರಿದ ಅನ್ನವನ್ನು ತೆಗೆದುಕೊಂಡು ಬಂದು ನನ್ನ ಕೂಡುವ ಕೋಣೆಯಲ್ಲಿ ಒಂದೆ ಒಂದು ಮುಂಬತ್ತಿಯ ಬೆಳಕಿನಲ್ಲಿ ಉಣ್ಣುತ್ತಿದ್ದೆವು. ಆ ದೊಡ್ಡ ಮನೆಯಲ್ಲಿ ನಾವಿಬ್ಬರೂ ಹೆರವರಂತೆ ನಡೆದುಕೊಳ್ಳುತ್ತಿದ್ದೆವು- ಎಲ್ಲೆಲ್ಲಿಯೂ ಎಂದೂ ಮಣಿಯದ ಪರಂಪರೆ ಟಾಟ್ಯಾನಾ ಸಿಮ್ಯೊನೊವ್ನಳ ಪದ್ಧತಿಯ ರಾಜ್ಯವೆ ರಾಜ್ಯ. ಆಕೆ, ಅಲ್ಲಿಯ ಆಳುಹೋಳು, ಮನೆಯಲ್ಲಿಯ ಮುದುಕ ಹೆಣ್ಣುಮಕ್ಕಳು, ಕುರ್ಚಿ ಮೇಜುಗಳು, ಗೋಡೆಯ ಮೇಲಿನ ಚಿತ್ರಗಳು ಕೂಡ ನನ್ನಲ್ಲಿ ಆದರ ಭಯಗಳನ್ನುಂಟುಮಾಡುತ್ತಿದ್ದುವು—ಆ ಮನೆಯಲ್ಲಿ ನನಗಾಯಿತು ಅವರಿಗಾಯಿತು ಸ್ಥಾನವಿಲ್ಲವೆಂದು ತೋರುತ್ತಿತ್ತು—ನಾವು ನಮ್ಮ ನಡೆನುಡಿಯಲ್ಲಿ ಒಳ್ಳೆಯ ಜಾಗರೂಕರಾಗಿರುತ್ತಿದ್ದೆವು. ಅದೆಲ್ಲವನ್ನು ಈಗ ವಿಚಾರ ಮಾಡಿ ನೋಡಿದರೆ ಎಷ್ಟೊ ಕ್ಷುಲ್ಲಕ ಸಂಗತಿಗಳು—ಆ ಎಂದೂ ಬದಲಾಗದ ನಿತ್ಯಕ್ರಮ, ತಮಗೆ ಸಂಬಂಧವಿಲ್ಲದ್ದರಲ್ಲಿ ಮನಸು ಹಾಕುವ ಆಳುಗಳ ತಂಡ—ಮನಸನ್ನು ವ್ಯಗ್ರಗೊಳಿಸುತಿದ್ದುವು ಉರಿಸುತ್ತಿದ್ದುವು; ಆದರೆ ಆಗಿನ ಆ ಸಂಕೋಚವೆ ನಮ್ಮ ಪ್ರೀತಿಯನ್ನು ಹೆಚ್ಚಿಸುತ್ತಿತ್ತು. ನಾನೊಬ್ಬಳೆ ಅಲ್ಲ, ಅವರು ಕೂಡ ಯಾವುದರ ಬಗೆಗೂ ಬಿಚ್ಚಿ ಮಾತನಾಡು ತ್ತಿರಲಿಲ್ಲ. ಮನಸಿಗೆ ಬಾರದ ವಿಷಯದೆಡೆಗೆ ಕಣ್ಣು ಮುಚ್ಚಿಬಿಡುತ್ತಿದ್ದರು. ಡಿಮಿಟ್ರಿಸಿಡೊರೊವ್ಹನೆಂಬ ಆಳು ತಂಬಾಕ ಸೇದುತ್ತಿದ್ದನು; ಪ್ರತಿ ನಿತ್ಯ ನಾವು ಊಟ ಮುಗಿಸಿದ ನಂತರ ದಿವಾಣಖಾನೆಯಲ್ಲಿ ಕುಳಿತಾಗ ಆತನು ನೆಟ್ಟಗೆ ನನ್ನ ಪತಿಯ ಕೋಣೆಗೆ ಹೋಗಿ ಅಲ್ಲಿದ್ದ ಬರಣಿಯಿಂದ ತಂಬಾಕ ಎಬ್ಬಿಸುತ್ತಿದ್ದನು. ಸರ್ಜಿ ಮಿಕ್ಯಾಲಿಕ್ಷರು ತುದಿಗಾಲಿನಿಂದ ನಡೆಯುತ್ತ

ನನ್ನ ಹತ್ತಿರ ಬರುತ್ತಿದ್ದರು—ಮೋರೆಯ ಮೇಲೆ ಆನಂದ, ಭೀತಿ ಕೂಡಿದ ಭಾವ—ಮೂಗಿನ ಮೇಲೆ ಬೊಟ್ಟಿಟ್ಟು ನನ್ನೆಡೆಗೆ ನೋಡಿ ಕಣ್ಣು ಚಿವುಟಿ ಆತ ನನ್ನು ತೋರಿಸುತ್ತಿದ್ದರು—ಆತನಿಗೂ ಯಾರಾದರೂ ತನ್ನನ್ನು ನೋಡುತ್ತಿರಬಹುದೆಂಬುದರ ಅರಿವಿರುತ್ತಿರಲಿಲ್ಲ ಆಮೇಲೆ ಡಿಮಿಟ್ರಿಸಿಡೊರೆವ್ಹನು ನಮ್ಮನ್ನು ನೋಡದೆ ಹೋದನೆಂದರೆ—ಪಾರಾಯಿತು ಸುಸೂತ್ರವೆಂಬ ಆನಂದದಲ್ಲಿ ನನ್ನೆಡೆಗೆ ಬಂದು ನನ್ನ ಮುತ್ತಿಡುತ್ತಿದ್ದರು—ಏನಾದರೊಂದು ಇಂಥ ಮೋಜಿನ ಪ್ರಸಂಗ ಬಂದಾಗಲೂ ಹಾಗೆ. ಅವರ ಈ ಅನಾಸ್ಥೆ, ಜನರಿಗೆ ಪುಟ ಕೊಡುವ ರೀತಿ ನೋಡಿ ಬೇಜಾರಾಗುತ್ತಿತ್ತು—ಅದೆಲ್ಲ ಅವರ ಮಾನಸಿಕ ದುರ್ಬಲತೆಯೆಂದುಕೊಳ್ಳುತ್ತಿದ್ದೆ—ಆದರೆ ನಾನೂ ಹಾಗೇ ವರ್ತಿಸುತ್ತಿದ್ದೆನೆಂಬುದನ್ನು ಮರೆತಿರುತ್ತಿದ್ದೆ. "ತನ್ನ ಮಾತನ್ನು ನಡೆಯಿಸಲು ಧೈರ್ಯವಿಲ್ಲದ ಮಗುವಿನಂತೆಯೆ ಇದು." ಎಂದುಕೊಳ್ಳುತ್ತಿದ್ದೆ.

"ಇದು ನೋಡು, ಜಾಣೆ!" ಒಮ್ಮೆ ನಾನು ಅವರ ಈ ಮಾನಸಿಕ ದುರ್ಬಲತೆಯಿಂದ ಆಶ್ಚರ್ಯಪಟ್ಟಾಗ ಹೇಳಿದರು; "ನನ್ನಂತೆ ಸುಖದಲ್ಲಿ ಮಗ್ನನಾದವನಿಗೆ ಅಸಂತುಷ್ಟನಾಗಲು ಅವಕಾಶವೆಲ್ಲಿ? ಹೆರವರ ಮೇಲೆ ಒತ್ತಾಯ ಮಾಡುವುದಕ್ಕಿಂತ ಸಡಿಲು ಬಿಡುವುದೆ ಒಳ್ಳೆಯದು. ಅದರ ಬಗೆಗೆ ನನ್ನ ಮನಸು ದೃಢವಾಗಿದೆ. ಸುಖಿಯಾಗಿರಬೇಕಾದರೆ ಇಂಥದೆ ಪರಿಸ್ಥಿತಿ ಬೇಕೆಂತಿಲ್ಲ. ನಮ್ಮ ಬಾಳಿನಲ್ಲಿ ಅದೆಂಥ ಸುಖ ತುಂಬಿದೆ. ನನಗೆ ಸಿಟ್ಟೆ ಬಾರದ್ದು—ಯಾವುದೂ ಕೆಟ್ಟದ್ದಿಲ್ಲ—ಇದ್ದರೆ ಅದು ದಯ ಬರುವಂಥದು ಇಲ್ಲವೆ ನಕ್ಕು ಬಿಡಬೇಕಂಥದು. ಮೇಲಾಗಿ '**ಹೆಚ್ಚಿನದೆಂದರೇನು**' **ಸರಿಯಾದುದಕ್ಕೆ ವಿರೋಧಿಯಾದುದು!** "ಇದನ್ನು ನಂಬುವೆಯಾ—ನಾನು ಹೊರಗಿನ ಗಂಟೆಯ ಸಪ್ಪಳ ಕೇಳಿದರೆ, ಒಂದು ಪತ್ರ ಬಂದರೆ,—ಅದೇಕೆ ಬೆಳಿಗ್ಗೆ ಎಚ್ಚತ್ತಾಗ ನನಗೇನೊ ಅಂಜಿಕೆಯಾಗುವುದು. ಬಾಳು ಸಾಗತಕ್ಕದ್ದೆ-ಯಾವುದೊ ಏನೊ ಬದಲಾಗುತ್ತಿರಬೇಕು—ಈಗಿನ ಈ ಕ್ಷಣ ಇದ್ದುದೆ ಲೇಸು."

ನನಗೇನು ತಿಳಿಯಲಿಲ್ಲ-ಅದರಲ್ಲಿ ನಂಬಿಕೆಯಾಯಿತು ಮಾತ್ರ, ನಾನು ಹಿಗ್ಗಿನಲ್ಲಿದ್ದೆ—ನಮ್ಮ ಪರಿಸ್ಥಿತಿಯಲ್ಲಿದ್ದವರ ಅನುಭವ ಹೆಚ್ಚು ಕಡಿಮೆ ಒಂದೆ-ಆದರೆ ಇದಕ್ಕೂ ಹೆಚ್ಚಿನದಾದ ಬೇರೆಯಾದ ಸುಖವೆಂಬುದು ಎಲ್ಲಿಯೊ ಇದ್ದಿರಬೇಕೆಂತಲೂ ಎನಿಸಿತು.

ಎರಡು ತಿಂಗಳುಗಳು ಸರಿದು—ಚಳಿ, ಮಂಜುಗಳೊಡನೆ ಚಳಿಗಾಲ ಬಂದು ಬಿಟ್ಟಿತು; ಅವರ ಸಾಂನಿಧ್ಯ ಸಾಹಚರ್ಯಗಳಿದ್ದರೂ ಏಕಾಕಿಯಿದ್ದಂತೆ ನಿಸಿತು—ಜೀವನವು ಒಂದೆ ಒಂದು ರೀತಿಯಾಗಿ ಸಾಗಿತು—ನನ್ನಲ್ಲಾಯಿತು ಅವರಲ್ಲಾಯಿತು ಹೊಸ ಭಾವ ಕಂಡುಬರಲಿಲ್ಲ—ನಾವಿಬ್ಬರೂ ಹಿಂದೆ ಹಿಂದೆ ಸಾಗಿ ಪೂರ್ವ ಸ್ಥಳಕ್ಕೆ ಬಂದಂತೆನಿಸಿತು. ಅವರು ಕೆಲಸದಲ್ಲಿ ಹೆಚ್ಚೆಚ್ಚಾಗಿ ತೊಡಗಿ ನನ್ನಿಂದ ದೂರ ದೂರವಿರುತ್ತಿದ್ದರು—ನನ್ನ ಹಿಂದಿನ ಮತವು ಮರು ಕಳಿಸಿತು—ಅವರು ತಮ್ಮ ಮನದಲ್ಲಿ ಒಂದು ಭಾಗವನ್ನು ನನಗೆ ಪ್ರವೇಶವಿ ಲ್ಲದಂತೆ ಮೀಸಲಾಗಿಟ್ಟಿದ್ದರು. ಎಂದೂ ಕದಲದ ಅವರ ಅವಿಚಲತೆ ನನ್ನನ್ನು ಕೆಣಕುತ್ತಿತ್ತು. ನಾನವರನ್ನು ಎಂದಿನಂತೆ ಪ್ರೀತಿಸುತ್ತಿದ್ದೆ—ಆ ಪ್ರೀತಿಯಲ್ಲಿ ಸುಖಪಡುತ್ತಿದ್ದೆ—ಆದರೆ ನನ್ನ ಪ್ರೀತಿ ಇದ್ದಕ್ಕಿದ್ದಂತೆ, ಹೆಚ್ಚಿಲ್ಲ ಕಡಿಮೆಯಿಲ್ಲ, ಇತ್ತು—ನನ್ನ ಮನದಲ್ಲಿ ಇನ್ನೊಂದು ವ್ಯಗ್ರಗೊಳಿಸುವ ಭಾವವು ನುಸುಳ ತೊಡಗಿತು. ಅವರ ಪ್ರೀತಿಯಲ್ಲಿ ಸಿಲುಕಿದ ಸುಖದ ನಂತರ ಕೇವಲ ಆ ಪ್ರೀತಿಯಲ್ಲಿ ಸಂತುಷ್ಟಳಾಗುವುದು ನನಗೆ ಸಾಲದು. ನನಗೆ ಚೈತನ್ಯ ಬೇಕಿತ್ತು—ಅನಿಚಲವಾದ ಜೀವನವು ಬೇಕಿರಲಿಲ್ಲ—ಒಂದು ಉತ್ಸಾಹ, ಒಂದು ದುಗುಡ, ನನ್ನ ಪ್ರೀತಿಗಾಗಿ ತ್ಯಾಗದ ಅವಕಾಶ—ನನ್ನಲ್ಲಿ ಉತ್ಸಾಹದ ಭರವಿತ್ತು—ನಮ್ಮ ನಿಶ್ಚಲವಾದ ಜೀವನದಲ್ಲಿ ಅದಕ್ಕೆ ಅನುವಿರಲಿಲ್ಲ. ನನಗೆ ಒಮ್ಮೊಮ್ಮೆ ಉದಾಸೀನತೆಯ ಝುಳುಕು ಬರುತ್ತಿತ್ತು—ನಾನದನ್ನು ನಾಚಿಕೆ ಯಿಂದ ಮರೆಯಿಡಲೆಸಗುತ್ತಿದ್ದೆ—ಪ್ರೀತಿಯ ಭರ, ಉಲ್ಲಾಸ ಕಂಡಾಗ ಅವ ರಿಗೆ ಭೀತಿಯಾದಂತೆನಿಸುತ್ತಿತ್ತು. ನನ್ನ ಮನಸ್ಥಿತಿಯ ಕಲ್ಪನೆ ನನಗಿಂತ ಮೊದಲು ಅವರಿಗಾಯಿತು. ಅವರು ಪೀಟರ್ಸ್‌ಬರ್ಗಗೆ ಹೋಗಬೇಕೆಂದು ಸೂಚಿಸಿದರು; ನಾನು ಈ ವಿಚಾರವನ್ನು ಬಿಡಬೇಕೆಂದೂ ನಮ್ಮ ಜೀವನ ಕ್ರಮವನ್ನು, ನಮ್ಮ ಸುಖವನ್ನು ಕದಲಿಸಕೂಡದೆಂದೂ ಬೇಡಿಕೊಂಡೆ. ಈ ಸುಖಕ್ಕಾಗಿ ಯತ್ನವೊ ತ್ಯಾಗವೊ ನನ್ನಿಂದೇನೂ ಇರಲಿಲ್ಲ—ಎರಡಕ್ಕೂ ನನ್ನಲ್ಲಿ ಶಕ್ತಿಯಿತ್ತೆಂಬುದರ ಅರಿವು ನನಗಿತ್ತು. ನಾನವರನ್ನು ಪ್ರೀತಿಸುತಿದ್ದೆ ನೆಂಬುದು ನನಗೆ ಕಂಡಿತ್ತು—ನಾನೆ ಅವರ ಸರ್ವಸ್ವವಾಗಿದ್ದೆ; ಆದರೆ ನಮ್ಮ ಈ ಪ್ರೀತಿಯನ್ನು ನೋಡಬೇಕೆಂತಲೂ ನನ್ನಿಚ್ಛೆ. ಎಷ್ಟು ಸಂಕಟಗಳು ಬಂದರೂ ಅವರನ್ನು ಪ್ರೀತಿಸಬೇಕೆಂಬ ಹಂಬಲ ನನ್ನದು. ನನ್ನ ಮನಸು,

ನನ್ನ ಭಾವಗಳು ತುಂಬಿ ತುಳುಕುತ್ತಿದ್ದುವು. ಆದರೆ ತಾರುಣ್ಯದ ಭಾವವೊ ಅಲೆದಾಡುವ ಹುಮ್ಮಸವೊ ಆ ನಮ್ಮ ಶಾಂತ ಜೀವನ ಕ್ರಮದಲ್ಲಿ ತೃಪ್ತಿಯನ್ನು ಕಾಣಲಿಲ್ಲ. ನನಗೆ ಬೇಕಾದಾಗ ನಾವು ಪಟ್ಟಣಕ್ಕೆ ಹೋಗಬಹುದೆಂದು ಅವರೇಕೆಂದವರೊ! ಅವರು ಹಾಗೆನ್ನದಿದ್ದರೆ ನಾನು ನನ್ನ ಅತೃಪ್ತಿಯ ವಿಚಾರಗಳೆಲ್ಲ ನನ್ನ ತಪ್ಪು ತಿಳಿವಳಿಕೆಯೊ ಮೂರ್ಖತನದ ವಿಚಾರಗಳೊ ಎಂದುಕೊಳ್ಳುತ್ತಿದ್ದೆ—ಈ ವಿಚಾರಗಳನ್ನು ಹತ್ತಿಕ್ಕುವುದರಲ್ಲಿ ತ್ಯಾಗಕ್ಕೆ ಅವಕಾಶವಂತೂ ಇದ್ದೆ ಇತ್ತು. ಹಳ್ಳಿಗಾಡು ಬಿಟ್ಟು ಹೋದದ್ದೆ ತಡ ನಿರುತ್ಸಾಹದಿಂದ ಬಿಡುಗಡೆಯಾಗುವುದೆಂಬ ವಿಚಾರ ನನ್ನ ಬೆನ್ನು ಬಿಡುತ್ತಿರಲಿಲ್ಲ. ಆದರೆ ನನ್ನ ಸ್ವಾರ್ಥ ವಿಚಾರಕ್ಕಾಗಿ, ಅವರನ್ನು ಅವರಿಗೆ ಬೇಕಾದ ವ್ಯಾಪಗಳಿಂದ ಹಟದಿಂದ ದೂರ ಒಯ್ಯುವ ಮಾತಿಗಾಗಿ ನನಗೆ ನಾಚಿಕೆಯಾಗುತ್ತಿತ್ತು. ದಿನಗಳು ಸಾಗಿದುವು—ಮಂಜು ದಟ್ಟೈಯಿತು. ನಾವೂ ಏಕಾಕಿಯಾಗಿ ಮೊದಲಿನಂತೆ ಉಳಿದೆವು—ಹೊರಗೆ ಎಲ್ಲೆಲ್ಲಿಯೊ ಕಲಕಲವೊ ಬೆಳಕೊ ಹುಮ್ಮಸವೊ—ಜನರ ಸಂದಣಿಯು ದುಃಖದಲ್ಲಿ ಕೊರಗುತ್ತಿತ್ತು ಸುಖದಲ್ಲಿ ಮೆರೆಯುತ್ತಿತ್ತು—ನಾವೂ ಎಲ್ಲಿಯೊ ಮೂಲೆಯಲ್ಲಿದ್ದ ನಮ್ಮ ಬಾಳೊ—ನಮ್ಮ ಅರಿವು ಕೂಡ ಅವರಿಗಿರಲಿಲ್ಲ. ದೈನಂದಿನಿಯು ನಮ್ಮ ಆಯುಷ್ಯವನ್ನು ಶಿಲಾಶಾಸನವಾಗಿ ಒಂದೆ ಒಂದು ಸ್ಥಿರರೂಪಕ್ಕೆ ತಂದು ಮುಟ್ಟಿಸಿತು—ನಮ್ಮ ಮನಸಿನ ಸ್ವಾತಂತ್ರ್ಯವು ಅಳಿದುಹೋಗುತ್ತ. ದಾಕ್ಷಿಣ್ಯಹೀನ ಕಾಲ ಪುರುಷನ ಗುಲಾಮರಾಗತೊಡಗಿದೆವು. ಮುಂಜಾನೆ ಆನಂದ ವೃತ್ತಿಯವರು—ಊಟದ ಕಾಲಕ್ಕೆ ರೀತಿಭಾತಿಯುಳ್ಳವರು—ಸಂಜೆಗೊ ಪ್ರೀತಿಯ ಪಾರಿವಾಳಗಳು. "ಎರಡನೆಯವರ ಮೇಲೆ ಉಪಕಾರ ಮಾಡುವುದೂ ಸದಾಚಾರದಿಂದಿರುವುದೂ ಸರಿಯಾದ ಮಾತುಗಳು;" ನಾನೆಂದುಕೊಂಡೆ, "ಅದಕ್ಕೆ ಮುಂದೆ ಅವಧಿ ಇದ್ದೆ ಇದೆ. ಆದರೆ ಇಂದಿಲ್ಲದಿದ್ದರೆ ಎಂದೂ ಇಲ್ಲ ಇಂಥ ಕೆಲಮಾತುಗಳಿವೆ." ಈಗಿದ್ದುದರಲ್ಲಿ ನನಗೆ ತೃಪ್ತಿಯಿರಲಿಲ್ಲ—ಸಾಹಸದ ಜೀವನವು ಬೇಕಿತ್ತು ನನಗೆ. ಭಾವವು ಜೀವನದ ಅಧಿದೈವತವಾಗಬೇಕಿತ್ತು—ಜೀವನವು ಭಾವದ ಅಧಿವತವಾಗಬೇಕಿರಲಿಲ್ಲ. ನಾನು ಒಂದು ಗುಡ್ಡದ ತುದಿಗೆ ಅವರ ಜೊತೆಗೆ ಹೋದೆನೆಂದೆನ್ನೋಣ—"ಇನ್ನು ಒಂದೆ ಅಡಿ, ನಾನು ಕೆಳಕ್ಕುರುಳುವೆನು—ಒಂದೆ ಒಂದು ಅಲೆದಾಟ, ಇದ್ದೆನೊ ಇಲ್ಲವೊ ಎಂದಾಗು

ವೆನು," ಎಂದು ನಾನು ಹೇಳಿದೆ—ಅವರು ನನ್ನನ್ನು ತಮ್ಮ ನಿಡಿದಾದ ತೋಳುಗಳಲ್ಲಿ ಅವಚಿಕೊಂಡು ಹಿಡಿದರು—ನನ್ನ ರಕ್ತ ಹೆಪ್ಪುಗಟ್ಟುವವರೆಗೆ-ಆಮೇಲೆ ಅವರು ನನ್ನನ್ನು ತಮಗೆ ಇಷ್ಟವಿದ್ದಲ್ಲಿ ಒಯ್ಯಬಹುದಲ್ಲವೆ—

ಈ ರೀತಿ ವಿಚಾರದಿಂದ ನನ್ನ ಪ್ರಕೃತಿಯ ಮೇಲೆ ಪರಿಣಾಮವಾಯಿತು—ಮನೋರೋಗದಿಂದ ಬಳಲತೊಡಗಿದೆ. ಅಂದು ನನ್ನ ವಿಕೃತಿ ಹೆಚ್ಚಾಗಿತ್ತು. ಅಂದು ಅವರು ಕಚೇರಿಯಿಂದ ರೊಚ್ಚಿಗೆದ್ದು ಬಂದಿದ್ದರು—ಇದು ಅನಪೇಕ್ಷಿತವಿತ್ತು. ನಾನು 'ಅದೇನು' ಎಂದು ಕೇಳಿದೆ. ಅವರು ಏನೂ ಹೇಳದೆ "ಏನೊ ಕಿರುಕಳ ವಿಷಯ" ಎಂದರು. ಆಮೇಲೆ ನನಗೆ ತಿಳಿಯಿತು, ಪೋಲಿಸ ಇನ್‌ಸ್ಪೆಕ್ಟರನು ಅವರ ಮೇಲಿನ ತನ್ನ ರೊಚ್ಚಿನಿಂದ ನಮ್ಮ ಆಳುಮನುಷ್ಯರನ್ನು ಕರೆದೊಯ್ದು ಕಾನೂನಿಗೆ ವಿರುದ್ಧವಾಗಿ ಚೌಕಶಿ ಮಾಡತೊಡಗಿದ್ದನು-ಬೇದರಿಕೆಯನ್ನೂ ನಡೆಸಿದ್ದನು. ನನ್ನ ಪತಿದೇವ ಇದನ್ನು ಸಹಿಸುವಂತಿರಲಿಲ್ಲ-"ಏನೊ ಪ್ರಸಂಗ-ಮೋಜು ನಡೆದಿದೆ" ಎಂದು ಸುಮ್ಮನೆ ಕುಳಿತುಕೊಳ್ಳಬೇಕೆನಿಸಲಿಲ್ಲ ಅವರಿಗೆ. ಅವರು ರೇಗಿದ್ದರು—ನನಗೆ ಹೇಳುವುದಕ್ಕೆ ಇಷ್ಟವಿರಲಿಲ್ಲ ಅವರು ನನಗೆ ಹೇಳದೆ ಇರುವ ಕಾರಣವೆಂದರೆ ನಾನೊಂದು ಮಗ, ನನಗೆ ಏನೂ ತಿಳಿಯಲಾರದು ಎಂದು ಭಾವಿಸಿದ್ದರೆಂದು ನಾನು ತಿಳಿದೆ. ಮಾರ್ಯಾಮಿನಿಷ್ಠಳು ಮನೆಯಲ್ಲಿದ್ದಳು--ಮುಂಜಾನೆಯ ಫಲಾಹಾರದ ಕಾಲಕ್ಕೆ ಆಕೆಗೆ ಬರಲಿಕ್ಕೆ ಹೇಳಿಂದು ಆಳಿಗೆ ಹೇಳಿದೆ. ಲಗಬಗನೆ ಫಲಾಹಾರ ಮುಗಿಸಿ ಆಕೆಯನ್ನು ದಿವಾಣಖಾನೆಗೆ ಕರೆದೊಯ್ದೆ—ಆಕೆಯ ಕೂಡ ಒಂದು ಕಿರುಕಳ ವಿಷಯದ ಬಗ್ಗೆ—ಅದಕ್ಕೆ ನನ್ನ ಸಂಬಂಧವೆ ಇರಲಿಲ್ಲ—ದೊಡ್ಡ ದನಿಯಿಂದ ಮಾತನಾಡತೊಡಗಿದೆ. ಅವರು ಕೋಣೆಯಲ್ಲಿ ಓಡಾಡುತ್ತಿದ್ದರು—ನಡುನಡುವೆ ನಮ್ಮೆಡೆಗೆ ನೋಡುತ್ತಿದ್ದರು. ಇದನ್ನು ನನಗೆ ಮತ್ತಷ್ಟು ಮಾತನಾಡಬೇಕು, ನಗಬೇಕು ಎಂದೆನಿಸಿತು ನಾನು ಮಾತನಾಡಿದ್ದು, ಮಾರ್ಯಾಮಿನಿಷ್ಠಳು ನನಗೆ ಹೇಳಿದ್ದು, ಎಲ್ಲವೂ ನಗೆ ಬರುವಂಥದೆ. ನನಗೆ ಒಂದು ಪಿಟ್ ಎಂದು ಮಾತನಾಡದೆ ಅವರು ತಮ್ಮ ಕೋಣೆಗೆ ಹೋಗಿ ಬಾಗಿಲ ಮುಚ್ಚಿಕೊಂಡರು ಅವರ ಸಪ್ಪಳ ಕೇಳದಂತಾದ ನಂತರ ನನ್ನ ಅಭಿಮಾನ ಇಲ್ಲದಂತಾಗಿ ನಾನು ಅಳು ಮೋರೆಗೆ ಬಂದೆ. ಮಾರಾಮಿನಿಷ್ಠಳಿಗೆ ಆಶ್ಚರ್ಯವೆನಿಸಿ ಏನಾಯಿತೆಂದು ಕೇಳಿದಳು. ನಾನು

ಏನೂ ಮಾತನಾಡದೆ ಸೋಫಾದ ಮೇಲೆ ಕುಳಿತುಕೊಂಡೆ—"ಅವರ ಮನಸಿಗೆ ತಾಪವೇಕಾಗಿದೆ." ನಾನು ಆಶ್ಚರ್ಯದಿಂದ ಯೋಚಿಸುತ್ತಿದ್ದೆ—"ಇದ್ದೀತು ಏನಾದರೊಂದು ಕಿರುಕಳ ವಿಷಯ—ಅವರದನ್ನು ಬೌ ಮಾಡಿರಬೇಕು. ನನಗೆ ಹೇಳಿದರೆ ಇದೀಗ ನಾನು ಅದೆಷ್ಟು ಅರ್ಥವಿಲ್ಲದ್ದೆಂಬುದನ್ನು ತೋರಿಸಿಕೊಡುವೆನು. ನನಗೆ ಏನೂ ತಿಳಿಯುವುದಿಲ್ಲವೆಂದು ತಾವು ತಿಳಿದುಕೊಂಡಿರುವರಲ್ಲ—ಒಳ್ಳೆಯ ಗಂಭೀರ ಮೋರೆ ಮಾಡಿ ನನ್ನನ್ನು ನಾಚಿಸಬೇಕಲ್ಲ—ತನ್ನ ಮಾತೆ ಸರಿಯಾದದ್ದು, ವಿಷಯ ಕ್ಷುಲ್ಲಕವಿದ್ದಾಗ, ಕಾರಣವಿಲ್ಲದಾಗ ಬೇಜಾರ ಮಾಡುವಾಗ ಯಾವುದು ಸರಿ ಯಾವುದು ಸರಿಯಾದ್ದಲ್ಲ ನನಗೂ ತಿಳಿಯುವುದು. "ನಾನು ಯೋಚಿಸಿದೆ," ಏನೂ ಮಾಡದೆ ಜೊನ್ನ ಆಯುಷ್ಯದಲ್ಲಿ—ಹೊರಗೆ ಇಡಿ ಜಗತ್ತು ಮುಂದೆ ನಡೆದಾಗ—ಕಾಲ ಕಳೆಯುವುದಕ್ಕಿಂತ ಗಡಿಬಿಡಿಯ ಆಯುಷ್ಯ ಕಳೆಯಬೇಕೆಂದೆನಿಸುವುದೂ ಸರಿಯೆ, ಮುಂದೆ ಸಾಗಬೇಕು, ಕ್ಷಣಕ್ಷಣಕ್ಕೂ ದಿನ ದಿನಕ್ಕೂ ಹೊಸ ಅನುಭವ ಪಡೆಯಬೇಕು ಎಂದು ನನಗೆನಿಸುವುದು ಅವರಿಗೂ ನಿಂತಲ್ಲೆ ನಿಲ್ಲಬೇಕು, ಜೊತೆಗೆ ನಾನೂ ಇರಬೇಕು ಎಂದೆನಿಸುವುದು. ನನ್ನನ್ನು ತೃಪ್ತಿಪಡಿಸುವುದು ಅದೆಷ್ಟು ಸುಲಭ ಮಾತು! ನನ್ನನ್ನು ಪಟ್ಟಣಕ್ಕೆ ಕರೆದೊಯ್ಯುವ ಕಾರಣವಿಲ್ಲ. ಅವರು ತಾವು ನನ್ನಂತೆ ಇರಬೇಕು—ತಮ್ಮ ಭಾವನೆಗಳನ್ನು ಹತ್ತಿಕ್ಕಿ ತಮ್ಮ ಮೇಲೆ ಅಲ್ಲದ ಒತ್ತಾಯವನ್ನು ಹೇರಬಾರದು—ಇದ್ದಕ್ಕಿದ್ದಂತೆ ಇದ್ದು ಬಿಡಬೇಕು. ನನಗೆ ಮಾತ್ರ ಉಪದೇಶ ಮಾಡುವರು—ತಾವು ಮಾತ್ರ ಸುಸೂತ್ರವಾಗಿಲ್ಲ. ಅದೆ ತೊಂದರೆಯಾಗಿದೆ."

ನನ್ನ ಕಣ್ಣಲ್ಲಿ ನೀರು ಸುರಿಯತೊಡಗಿದುವು—ನಾನವರ ಮೇಲೆ ರೇಗಿದ್ದೆ. ನನ್ನ ಈ ರೇಗಿನಿಂದ ನಾನೆ ಭೀತಿಗೊಂಡೆ—ನಾನವರ ಕೋಣೆಗೆ ಹೋದೆ. ಅವರು ಟೇಬಲ್ಲಿನೆದುರಿಗೆ ಬರೆಯುತ್ತ ಕುಳಿತಿದ್ದರು. ನನ್ನ ಕಾಲ ಸಪ್ಪಳ ಕೇಳಿ ಕ್ಷಣ ಕತ್ತೆತ್ತಿ ನೋಡಿದರು, ಮತ್ತೆ ತಮ್ಮ ಬರೆವಣಿಗೆಯಲ್ಲಿ ತೊಡಗಿದರು. ಅವರಲ್ಲಿ ನಿಶ್ಚಲತೆ, ಅನಾಸ್ಥೆ ಕಂಡುಬಂದಿತು. ಅವರ ನೋಟ ನನ್ನನ್ನು ರೇಗಿಸಿತು. ಅವರ ಹತ್ತಿರ ಹೋಗದೆ ನಾನು ಟೇಬಲ್ಲಿನ ಹತ್ತಿರವೆ ನಿಂತೆ—ಒಂದು ಪುಸ್ತಕವನ್ನು ತೆರೆದು ನೋಡತೊಡಗಿದೆ. ಅವರು ತಮ್ಮ ಬರೆವಣಿಗೆ ನಿಲ್ಲಿಸಿ ನನ್ನೆಡೆಗೆ ನೋಡಿದರು.

" ಮಾಷಾ, ನೀನು ರೇಗಿಕೊಂಡಿರುವಿ ಏನು ? " ಅವರು ಕೇಳಿದರು.

ನಾನು ಸಿಟಗೊಂಡ ನೋಟದಿಂದ ಉತ್ತರ ಕೊಟ್ಟೆ—ಅದರ ಅರ್ಥ ವಿಷ್ಟೆ; " ಒಳ್ಳೆಯ ಆಸ್ಥೆಯುಳ್ಳವರಾಗಿರುವಿರಿ--ಕೇಳಿ ಪ್ರಯೋಜನವೇನು ? " ಅವರು ತಲೆ ಅಲ್ಲಾಡಿಸಿದರು—ಅಂಜಂಜುತ್ತ ತವಕದಿಂದ ನೋಡಿ ನಕ್ಕರು. ಅವರ ಆ ನಗು, ಇದೆ ಮೊದಲು ನನ್ನಿಂದ ನಗುವನ್ನು ಹೊರಡಿಸಲಿಲ್ಲ.

" ಇಂದು ನಿಮಗೇನಾಗಿತ್ತು ? " ನಾನು ಕೇಳಿದೆ; " ನನಗೇಕೆ ಹೇಳ ಲಿಲ್ಲ ? "

" ವಿಶೇಷವೇನಿಲ್ಲ. ಕಿರುಕಳ ತೊಂದರೆ, " ಅವರೆಂದರು;

" ಈಗಲೂ ನಾನು ಹೇಳಬಹುದು. ನಮ್ಮ ಆಳುಮನುಷ್ಯರಿಬ್ಬರು ಪಟ್ಟಣಕ್ಕೆ ಹೋಗಿದ್ದರು—"

ನಾನವರನ್ನು ಮುಂದೆ ಸಾಗಗೊಡಲಿಲ್ಲ.

" ಫಲಾಹಾರದ ಕಾಲಕ್ಕೆ ನಾನು ಕೇಳಿದಾಗ ನನಗೇಕೆ ಹೇಳಬಾ ರದಿತ್ತು ? "

" ನಾನಾಗ ಸಿಟ್ಟಿನಲ್ಲಿದ್ದೆ—ಏನಾದರೂ ಮೂರ್ಖನಂತೆ ಮಾತನಾಡ ಬಹುದಾಗಿತ್ತು. "

" ಆಗ ನನಗೆ ತಿಳಿದುಕೊಳ್ಳುವುದಿತ್ತು "

" ಅದೇನು ? "

" ನಾನು ನಿಮಗೆ ಸಾಹಾಯ್ಯ ಮಾಡಲಾರೆನೆಂದೇಕೆ ತಿಳಿದುಕೊ ಳ್ಳುವಿರಿ ? "

" ಸಾಹಾಯ್ಯ ಮಾಡಲಾರಿಯೆ ! " ತಮ್ಮ ಲೆಕ್ಕಣಿಕೆಯನ್ನು ಒಗಿಟ್ಟು ನಕ್ಕೆಂದರು; " ನೀನಿಲ್ಲದೆ ನಾನು ಜೀವಿಸಲಾರೆ. ನೀನು ನನಗೆ ಸಾಹಾಯ್ಯ ಮಾಡುತ್ತಿರುವುದಂತೂ ನಿಜ—ಆದರೆ ಎಲ್ಲವನ್ನು ಮಾಡುವಿ. ನೀನು ತಪ್ಪು ತಿಳಿದುಕೊಂಡಿರುವಿ. ಅವರು ನಕ್ಕೆಂದರು; " ನನ್ನ ಜೀವನ ನಿನ್ನನ್ನವಲಂಬಿ ಸಿದೆ. ನನಗೆ ನಿನ್ನ ಆವಶ್ಯಕತೆಯಿದೆ—ಎಲ್ಲದರಲ್ಲಿ ನೀನಿರುವಿ— ಇದರಲ್ಲಿಯೆ ನನಗೆ ಸಂತೋಷ.... .......

" ಅದೆಲ್ಲ ಗೊತ್ತಿದೆ; ನಾನೆಂದರೆ ಚುಕ್ಕು ಬಡಿದು ಮಲಗಬೇಕಾದ ಒಂದು ಮಗು; '' ನಾನೆಂದೆ—ನನ್ನ ದನಿ ಅವರನ್ನು ಆಶ್ಚರ್ಯಗೊಳಿಸಿತು—ಅದೊಂದು ಹೊಸ ಅನುಭವವಿದ್ದಂತೆ ಮೇಲಕ್ಕೆ ನೋಡಿದರು. " ನನಗೆ ಸುಮ್ಮನಾಗಿರುವುದು ಬೇಕಿಲ್ಲ. ಅದು ನಿಮಗೆ ಸಲ್ಲುವುದು—ನಿಮಗೇ ಸಲ್ಲುವುದು. " ನಾನು ಮುಂದೆ ಜೋಡಿಸಿದೆ.

" ಒಳ್ಳೆಯದು, " ಅವರು ನಾನು ಮುಂದೇನೆನ್ನುವೆನೆಂದಂಜಿ ನನ್ನನು ಸಾಗಗೊಡಲಿಲ್ಲ; " ನಾನು ಎಲ್ಲ ಸಂಗತಿಗಳನ್ನು ಹೇಳಿದ ಮೇಲೆ ನಿನ್ನ ಅಭಿಪ್ರಾಯ ಬೇಕಿದೆ. ''

" ನನಗೇನೂ ಕೇಳುವುದಿಲ್ಲ " ನಾನೆಂದೆ. ನನಗೆ ಎಲ್ಲವನ್ನಂತೂ ಕೇಳಬೇಕೆಂದಿತ್ತು ಆದರೆ ಅವರ ನಿಶ್ಚಲತೆಯನ್ನು ಕದಲಿಸುವುದರಲ್ಲಿ ಮೋಜೆನಿಸಿತು; " ನನಗೆ ಆಯುಷ್ಯದ ಆಟವನ್ನು ಕೂಡಿ ಆಡಬೇಕಿಲ್ಲ, '' ನಾನೆಂದೆ, " ನನಗೂ ನಿಮ್ಮಂತೆ ಆಯುಷ್ಯ ಕಳೆಯುವುದಿದೆ—ನಿಜವಾದ ಆಯುಷ್ಯ. "

" ನಿನ್ನನ್ನು ಸಹ ಭಾಗಿನಿಯಾಗಿರಿಸಬಯಸುತ್ತೇನೆ-" ಅವರು ಮುಂದೆ ಸಾಗದಾದರು—ಅವರ ಮುಖದ ಮೇಲೆ ದುಃಖ ಮೂಡಿತ್ತು ಕ್ಷಣ ಹೊತ್ತು ಸುಮ್ಮನಿದ್ದರು.

" ಯಾತರಲ್ಲಿ ನ್ನೀನು ಸಹ ಭಾಗಿನಿಯಾಗಿಲ್ಲ? " ಅವರು ಕೇಳಿದರು; " ಆ ಇನ್‌ಸ್ಪೆಕ್ಟರನೊ ಆ ಕುಡುಕ ಆಳುಗಳೊ-ಅವರ ಕೂಡ ಗುದುಮುರಿಗೆ ಹಾಕುವುದು ನಾನು ಮಾಡಬೇಕಾಗುವುದೆಂದೊ? ''

" ಅದೊಂದೆ ಅಲ್ಲ, " ನಾನೆಂದೆ.

" ದಯವಿಟ್ಟು ನನ್ನ ಮಾತನ್ನು ತಿಳಿದುಕೊ, ಅವರೆಂದರು, " ಗಡಿಬಿಡಿಯೆಂದರೆ ಅದೆಷ್ಟು ತ್ರಾಸದ್ದು ಅನುಭವದಿಂದ ನಾನು ತಿಳಿದುಕೊಂಡಿದ್ದೇನೆ. ನಾನು ನಿನ್ನನ್ನು ಪ್ರೀತಿಸುತ್ತೇನೆ —ಅದಕ್ಕಾಗಿಯೆ ಈ ತ್ರಾಸಿನಿಂದ ನಿನ್ನನುಳಿಸಬೇಕೆಂದು ಹವಣಿಸುತ್ತೇನೆ ನನ್ನ ಜೀವನವೆಂದರೆ ನಿನ್ನಲ್ಲಿಯ ಪ್ರೀತಿ—ಅದಶಕ್ಯವಾಗುವಂತೆ ಮಾಡಬೇಡ. "

" ನೀವಾಡುವುದೆಲ್ಲ ಸರಿಯಾದದ್ದೆ, " ನಾನವರೆಡೆಗೆ ನೋಡದೆ ನುಡಿದೆ.

ಅವರ ನಿಶ್ಚಲತೆ ಶಾಂತತೆಗಳನ್ನು ನೋಡಿ ನನಗೆ ರೇಗಿಹೋಯಿತು—ಆದರೂ ಅಲ್ಲಿ ವ್ಯಗ್ರತೆ ಅನುತಾಪಗಳ ಭಾವನೆಯಿತ್ತೆಂಬುದರ ಅರಿವಾಯಿತು.

" ಮಾಷಾ, ಏನಾಯಿತು ? " ಅವರು ಕೇಳಿದರು. " ಪ್ರಶ್ನೆ ನಮ್ಮಿಬ್ಬ ರಲ್ಲಿ ಸರಿಯಾದವರಾರೆಂಬುದಲ್ಲ—ಹಾಗೆ ಇಲ್ಲವೆ ಇಲ್ಲ; ಆದರೆ ಪ್ರಶ್ನೆಯಿಷ್ಟೆ, ನನ್ನ ವಿರುದ್ಧವಾಗಿ ನಿನ್ನ ತಕರಾರು ಇರುವುದಾದರೂ ಏನು ? ಉತ್ತರ ಕೊಡುವ ಮೊದಲು ವೇಳೆ ತೆಗೆದುಕೊ—ನಿನ್ನ ಮನಸಿನಲ್ಲಿದ್ದುದನ್ನೆಲ್ಲ ಹೇಳು. ನಿನ್ನಲ್ಲಿ ನನ್ನ ಬಗೆಗೆ ಅಸಮಾಧಾನವಿದೆ–ಅದೂ ಸರಿಯಾದದ್ದೆ; ನಾನು ತಪ್ಪು ಮಾಡಿದ್ದಾಗರೂ ಏನು ಎಂಬುದಾದರೂ ತಿಳಿಯಲಿ. "

ನನ್ನ ಭಾವಗಳನ್ನು ನಾನು ಬಿಚ್ಚಿಯಾದರೂ ಹೇಗೆ ತೋರಿಸಲಿ? ಅವರಿಗೆ ನನ್ನ ಭಾವಗಳೆಲ್ಲ ತಿಳಿದುವು—ನಾನು ಮತ್ತೆ ಅವರೆದುರಿಗೆ ಮಗುವಿನಂತೆ ನಿಂತೆ—ನನ್ನ ಪ್ರತಿಯೊಂದು ಕೃತಿ ಅವರಿಗೆ ತಿಳಿಯದೆ ಅವರದನ್ನು ಊಹಿಸದೆ ಇರಲಿಲ್ಲ—ಇದೆಲ್ಲವೂ ನನ್ನ ಸಂತಾಪವನ್ನು ಹೆಚ್ಚಿಸದಿರಲಿಲ್ಲ.

" ನಿಮ್ಮ ಬಗೆಗೆ ನಾನೇನೆನ್ನುವುದಿಲ್ಲ, " ನಾನೆಂದೆ; " ನನಗೆ ಬೇಜಾರಾಗಿದೆ—ಬೇಜಾರಾಗುವುದು ನನಗೆ ಬೇಡ. ಅದಕ್ಕುಪಾಯವಿಲ್ಲವೆಂದು ನೀವು ಹೇಳುವಿರಿ. ಎಂದಿನಂತೆ ಅದೂ ಸರಿಯಾದದ್ದೆ. "

ನಾನು ಮಾತನಾಡುವಾಗ ಅವರೆಡೆಗೆ ನೋಡಿದೆ. ನನ್ನ ಇಷ್ಟ ನೆರವೇರಿತ್ತು. ಅವರ ನಿಶ್ಚಲತೆ ಅಳಿದು ಹೋಗಿತ್ತು. ಅವರ ಮೋರೆಯ ಮೇಲೆ ಕಾತರ ವ್ಯಥೆಗಳೂ ಮೂಡಿಕೊಂಡಿದ್ದುವು.

" ಮಾಷಾ, " ಅವರು ವ್ಯಥೆಗೊಂಡು ತಗ್ಗಿದ ದನಿಯಿಂದ ನುಡಿದರು; " ಇದು ಕ್ಷುಲ್ಲಕ ಮಾತಲ್ಲ. ನಮ್ಮ ಸುಖದ ಪಣವಿದೆ ಇದರಲ್ಲಿ. ನನಗೆ ಎದುರುತ್ತರ ಕೊಡದೆ ಇದು ಕೇಳು—ನೀನು ನನ್ನನ್ನೇಕೆ ಪೀಡಿಸುವಿ ? "

ನಾನು ತಡೆದು ನಿಲ್ಲಿಸಿದೆ.

" ನೀವಾಡುವುದು ಸರಿಯೆ. ಮಾತನಾಡುವುದೆ ವ್ಯರ್ಥ; ನಿಮ್ಮ ಮಾತು ಸರಿಯೆ. " ನಾನು ಅನಾವಸ್ಥೆಯಿಂದ ನುಡಿದೆ—ಒಂದು ಪಿಶಾಚಿಯು ನನ್ನ ದನಿಯಿಂದ ಒಡನುಡಿಯುತ್ತಿತ್ತೊ ಏನೊ.

" ನೀನೇನು ಮಾಡುತ್ತಿರುವಿ ಎಂಬುದರ ಅರಿವು ನಿನಗಿದ್ದರೆ!–" ಅವರೆಂದರು—ಅವರ ದನಿ ನಡುಗಿತು.

ನಾನು ಅಳತೊಡಗಿದೆ—ಮನದ ಮೇಲಿನ ಭಾರ ಕಡಿಮೆಯಾದಂತೆನಿಸಿತು ಅವರು ನನ್ನ ಹತ್ತಿರ ಕುಳಿತರು—ಮಾತನಾಡಲಿಲ್ಲ. ಅವರ ಬಗೆಗೆ ಕನಿಕರವೆನಿಸಿತು—ನನ್ನ ಬಗೆಗೆ ನಾಚಿಕೆಯಾಯಿತು—ನಾನು ಮಾಡಿದುದಕ್ಕೆ ಮರುಕವೆನಿಸಿತು. ಅವರೆಡೆಗೆ ನೋಡುವುದನ್ನು ಬಿಟ್ಟೆ. ಆಗ ಅವರ ನೋಟದಲ್ಲಿ ಕಠೋರತೆಯಾಗಲಿ ವ್ಯಗ್ರತೆಯಾಗಲಿ ಕಂಡೆ ಕಾಣುವೆನೆಂದು ತೋರಿತು. ಕೊನೆಗೆ ಕತ್ತೆತ್ತಿ ಅವರೆಡೆಗೆ ನೋಡಿದೆ. ಅವರು ಸ್ಥಿರವಾಗಿ ಕಕ್ಕುಲತೆಯಿಂದ ನೋಡುತ್ತಿದ್ದರು—ಕ್ಷಮೆ ಬೇಡುತ್ತಿರುವಂತಿತ್ತು. ನಾನವರ ಕೈ ಹಿಡಿದು ನುಡಿದೆ, " ಕ್ಷಮಿಸಿರಿ ! ನಾನು ಮಾತನಾಡುತ್ತಿರುವುದೇನೆಂಬುದು ನನಗೇ ತಿಳಿಯಲೊಲ್ಲದು. "

" ನನಗೆ ತಿಳಿದಿದೆ—ನೀನಾಡಿದ್ದು ಸರಿಯೆ. "

" ಇದರರ್ಥವೇನು ? " ನಾನು ಕೇಳಿದೆ.

" ನಾವು ಪೀಟರ್ಸ್‌ಬರ್ಗಗೆ ಹೋಗಬೇಕೆಂದು, " ಅವರೆಂದರು; " ಸದ್ಯಕ್ಕೆ ಇಲ್ಲಿ ನಮ್ಮದೇನೂ ಕೆಲಸವಿಲ್ಲ. "

" ನಿಮ್ಮಿಷ್ಟ, " ನಾನೆಂದೆ.

ಅವರು ನನ್ನನ್ನು ತಬ್ಬಿ ಮುತ್ತಿಟ್ಟರು.

" ನನ್ನನ್ನು ಕ್ಷಮಿಸು, " ಅವರೆಂದರು. " ನನ್ನದೆ ತಪ್ಪು. "

ಆ ಸಂಜೆ ನಾನು ಬಹಳೊತ್ತಿನ ವರೆಗೆ ( ಪಿಯಾನೊ ) ನುಡಿಸಿ ತೋರಿಸಿದೆ—ಅವರು ಕೋಣೆಯಲ್ಲಿ ಓಡಾಡುತ್ತಿದ್ದರು. ತಮ್ಮಷ್ಟಕ್ಕೆ ತಾವೆ ಏನಾದರೂ ಪುಟಪುಟಿಸುವ ರೂಢಿಯಿತ್ತವರಿಗೆ. ನಾನು ಕೇಳಿದಾಗ ಅವರು ತುಸು ವಿಚಾರ ಮಾಡಿ ಹೇಳುತ್ತಿದ್ದರು—ಸಾಮಾನ್ಯವಾಗಿ ಅದೊಂದು ಪದ್ಯವಿರುತ್ತಿತ್ತು—ಒಮ್ಮೊಮ್ಮೆ ಏನಾದರೊಂದು ಹುಚ್ಚುಚ್ಚಾರ—ಅದರ ಮೇಲಿಂದ ನಾನವರ ಮನಸ್ಥಿತಿಯ ಅಂದಾಜು ಮಾಡಿಕೊಳ್ಳುತ್ತಿದ್ದೆ. ಈಗ ನಾನು ಕೇಳಿ

ಬೇರೆ ಬೇರೆಯಾದ ಸುಗ್ಗಿ—ಅವರ ಪ್ರೀತಿ ಸಾಂನಿಧ್ಯಗಳಿಂದ ಬೆಳಗಿದ್ದು—ಅವರೆದುರು ನಮ್ಮ ಆ ಹಳಿವಾಡಿನಲ್ಲಿಯ ಜೀವನ ಅದೆಷ್ಟು ಸುದೂರವಾದುದು, ಕಿರುಕಳವಾದುದು. ಉಚ್ಚ ಸಮಾಜದಲ್ಲಿಯ ಜನರು ದುರಭಿಮಾನಿಗಳೂ ಉದಾಸೀನರೂ ಎಂದು ಭಾವಿಸಿದ್ದೆ. ಆದರೆ ಆಶ್ಚರ್ಯವೆಂದರೆ ನಾನು ಹೋದಲ್ಲಿ ಎಲ್ಲ ನನ್ನನ್ನು ಆಪ್ತೇಷ್ಟರಷ್ಟೆ ಅಲ್ಲ ಪರಕೀಯರು ಕೂಡ ಆದರದಿಂದ ಹಿಗ್ಗಿನಿಂದ ಸತ್ಕರಿಸಿದರು. ನಾನೆ ಅವರ ವಿಚಾರದ ಗುರಿಯಾಗಿದ್ದೆನೋ—ನಾನು ಬರುವುದಕ್ಕಾಗಿ ಅವರು ಕಾಯ್ದುಕೊಂಡು ಕುಳಿತಿದ್ದರೊ ತಮ್ಮ ಸುಖವು ಪರಿಪೂರ್ಣವಾಗಲಿಕ್ಕೆ ಎಂದಾಗಿತ್ತು. ನಾನು ಉಚ್ಚವೆಂದುಕೊಂಡ ಆ ಸಮಾಜದಲ್ಲಿ ನನ್ನ ಪತಿಯು ಗುರುತಿನ ಜನರಿದ್ದುದು ನನಗೆ ಸೋಜಿಗವೆನಿಸಿತು—ನನ್ನ ಪತಿಯು ಅವರ ಬಗೆಗೆ ಎಂದೂ ಉಸಿರಿರಲಿಲ್ಲ. ಎಷ್ಟೋ ಜನರ ಬಗೆಗೆ ಅವರು ತುಚ್ಛತಾಪೂರ್ವಕವಾಗಿ ಮಾತನಾಡಿದ್ದು ನನಗೆ ವಿಚಿತ್ರ ಮತ್ತು ಸರಿಬಾರದಂತಿತ್ತು—ಆ ಜನರೊ, ನನಗೆಷ್ಟು ಒಳ್ಳೆಯವರಾಗಿ ತೋರಿದ್ದರು. ನಮ್ಮನ್ನು ಸ್ತುತಿಸುವ ಅನೇಕ ಜನರ ಕೂಡ ಉದಾಸೀನತೆಯಿಂದ ನಡೆದುಕೊಂಡದ್ದು, ಎಷ್ಟೊ ಗುರುತಿನ ಜನರನ್ನು ತಪ್ಪಿಸಿದ್ದು ನನಗೆ ತಿಳಿಯದ ವಿಷಯಗಳಾಗಿದ್ದುವು. ಒಳ್ಳೆಯ ಜನರ ಗುರುತಾಗುವುದು ವಿಹಿತ—ಇಲ್ಲಿ ಎಲ್ಲರೂ ಒಳ್ಳೆಯವರು.

"ನಾವಿನ್ನು ಹೀಗೆ ಮಾಡಬೇಕು, ತಿಳಿಯಿತೆ," ನಾವು ಹಳ್ಳಿವಾಡ ಬಿಡುವ ಮೊದಲು ಅವರೆಂದರು; "ಇಲ್ಲಿ ನಾವು ಚಿಕ್ಕ ಪುಟ್ಟ ಕುಬೇರರೆ ಪಟ್ಟಣಗಳಲ್ಲಿ ನಾವು ಸಿರಿವಂತರು ಕೂಡ ಅಲ್ಲ. ಈಸ್ಟರದ ನಂತರ ನಾವು ಅಲ್ಲಿ ಇರಕೂಡದು-ಉಚ್ಚ ಸಮಾಜವಲ್ಲಿ ಹೋಗಕೂಡದು-ಪೇಚಿನಲ್ಲಿ ಬೀಳಬಹುದು ನಾವು ನಿನಗಾಗಿಯೂ ನಾನು ಅದನ್ನು ಬಯಸಲಾರೆ."

"ಸಮಾಜದಲ್ಲಿ ಹೋಗುವ ಅಗತ್ಯವೇನಿದೆ?" ನಾನು ಕೇಳಿದೆ; "ಏನೊ ನಾಟ್ಯ ಗೃಹಗಳನ್ನು ನೋಡೋಣ, ಆಪ್ತೇಷ್ಟರಿಗೆ ಬೆಟ್ಟಿಯಾಗೋಣ, ಗೀತಿ ನಾಟ್ಯಗಳಿಗೆ, ಹೋಗೋಣ, ಒಳ್ಳೆಯ ಸಂಗೀತವನ್ನು ಕೇಳೋಣ, ಈಸ್ಟರ ಬರುವ ಮೊದಲೆ ಮರಳಿ ಬರಲಿಕ್ಕೆ ತಯಾರಾಗಿ ಬಿಡೋಣ"

ಆದರೆ ಈ ಎಲ್ಲ ಯೋಜನೆಗಳು ಪೀಟರ್ಸ್‌ಬರ್ಗಿಗೆ ಹೋದ ಕ್ಷಣಕ್ಕೆ ಮರೆತು ಹೋದುವು. ನಾನು ಒಮ್ಮೆಲೆ ಹೊಸ ಹಿಗ್ಗಿನ ಜಗತ್ತಿನಲ್ಲಿ ನನ್ನನ್ನು

ಕಂಡುಕೊಂಡೆ— ಹೊಸ ಸುಖಗಳು, ಹೊಸ ಆಕರ್ಷಣೆಗಳು ನನ್ನ ಹಿಂದಿನ ಆಯುಷ್ಯದೆಡೆಗೆ, ಯೋಜನೆಗಳೆಡೆಗೆ ಬೆನ್ನು ತಿರುವಿಸಿದುವು. “ ಅದೆಲ್ಲ ಪೂರ್ವ ಸಿದ್ಧತೆ—ಆಯುಷ್ಯದ ಆಟವನ್ನು ಕೂಡಿ ಆಡುವುದು. ಇದೊ, ನಿಜವಾದುದು. ಇದರಲ್ಲಿಯೆ ಮುಂದಿನ ಬಾಳಿನ ನಿಶ್ಚಿತಾರ್ಥ. ” ಇವೆ ಮೊದಲಾದವು ನನ್ನ ವಿಚಾರಗಳು—ಚಂಚಲತೆ, ಮರುಕದ ಲಕ್ಷಣಗಳು—ಹಳ್ಳಿಯಲ್ಲಿದ್ದಾಗಿನವು—ಮಟಾಮಾಯವಾದುವು. ನನ್ನ ಪತಿಯ ಮೇಲಿನ ನನ್ನ ಪ್ರೀತಿ ಸ್ಥಿರತೆಯನ್ನು ಹೊಂದಿತು—ಅವರ ಪ್ರೀತಿ ಕಡಿಮೆಯಾಗಿದ್ದೀತೊ ಏನೊ ಎಂಬುದನ್ನು ಯೋಚಿಸದಾದೆ—ನನಗೆ ಅನುಮಾನವೆ ಉಳಿದಿರಲಿಲ್ಲ ಅವರ ಬಗೆಗೆ—ನನ್ನ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದರು, ನನ್ನ ಭಾವಗಳಲ್ಲಿ ಬೆರೆತುಕೊಳ್ಳುತ್ತಿದ್ದರು, ನನ್ನ ಇಚ್ಛೆಗಳನ್ನು ತೃಪ್ತಿಗೊಳಿಸುತ್ತಿದ್ದರು. ಅವರ ಗಾಂಭೀರ್ಯ, ಇನ್ನೂ ಉಳಿದಿದ್ದರೆ, ನನ್ನನ್ನು ಕೆಣಕುತ್ತಿರಲಿಲ್ಲ. ಅವರು ನನ್ನನ್ನು ಪ್ರೀತಿಸುವುದಲ್ಲದೆ ನನ್ನ ಬಗೆಗೆ ಅಭಿಮಾನ ತಾಳಿದ್ದರೆಂದು ನನ್ನ ಮನವರಿಕೆಯಾಯಿತು. ನಾವು ಯಾರನ್ನಾದರೂ ಕಾಣಹೋದರೆ, ಹೊಸ ಪರಿಚಯ ಮಾಡಿಕೊಂಡರೆ, ಸಂತೋಷ ಕೂಟವನ್ನೇರ್ಪಡಿಸಿದರೆ—ಆಗ ನಾನು ಎಲ್ಲಿ ಏನಾದರೂ ಆಗಬಾರದ ತಪ್ಪು ನನ್ನಿಂದಾಗುವುದೊ ಎಂದು ಒಳ ಒಳಗೆ ಅಂಜಿಕೆಸಾಪಾಗಿರುತ್ತಿತ್ತು ನನಗೆ—ಅದೆಲ್ಲ ಮುಗಿದ ಮೇಲೆ ನನಗೆನ್ನುತ್ತಿದ್ದರು; “ ಬಲೆ ಹುಡಿಗಿ ! ಬೇಷ್ ! ಭಯಪಡುವ ಕಾರಣವಿಲ್ಲ. ಚೊಕ್ಕಾಯಿತೆಲ್ಲವೂ. ” ಅವರ ಸ್ತುತಿ ನನ್ನನ್ನು ಹಿಗ್ಗಿಸುತ್ತಿತ್ತು. ನಾವು ಬಂದ ತುಸು ದಿನಗಳಲ್ಲಿಯೆ ಅವರು ತಮ್ಮ ತಾಯಿಗೆ ಪತ್ರ ಬರೆದರು—ನನಗೂ ಅದರಲ್ಲಿ ಎರಡು ಒಳಿ ಬರೆಯಲಿಕ್ಕೆ ಹೇಳಿದರು—ಪತ್ರ ಮಾತ್ರ ನೋಡಬಾರದಂತೆ—ನಾನು ಹಠಮಾಡಿ ಓದಿದೆ; ಅವರು ಬರೆದಿದ್ದರು, “ ಮಾಷಳನ್ನು ನೀನು ಗುರುತಿಸಲಾರಿ, ನಾನಂತೂ ಇಲ್ಲವೆ ಇಲ್ಲ. ಆ ಲೀಲೆ, ಆ ಸಂಯಮ, ಆ ಸಹಜತೆ, ಸಮಾಜದಲ್ಲಿ ನಡೆದುಕೊಳ್ಳುವಾಗಿನ ಆ ಸಹಜಭಾವ, ಸುಸ್ವಭಾವ, ಎಲ್ಲಿಂದ ಬಂದಿತೊ ನಾ ಕಾಣೆ—ಆಕೆಯನ್ನು ನಾನೆ ಸಾಕಷ್ಟು ಕೊಂಡಾಡಲಾರೆ—ಆಕೆಯನ್ನು ಹೆಚ್ಚೆಚ್ಚಾಗಿ ಪ್ರೀತಿಸಬೇಕು—ಸಾಧ್ಯವಿದ್ದರೆ—”

“ ಈಗ ನನಗೆ ಗೊತ್ತಾಯಿತು ನಾನು ಹೇಗಿರುವೆನೆಂಬುದು, ” ನಾನು ಯೋಚಿಸಿದೆ. ನನ್ನ ಆನಂದ ಅಭಿಮಾನಗಳ ಭರದಲ್ಲಿ ನಾನವರನ್ನು ಮೊದಲಿ

ಗಿಂತ ಹೆಚ್ಚೆಚ್ಚಾಗಿ ಪ್ರೀತಿಸತೊಡಗಿದೆ. ಹೊಸ ಪರಿಚಿತದಲ್ಲಿ ನನ್ನ ಪ್ರಭಾವ ನೋಡಿ ನನಗಾಶ್ಚರ್ಯವೆನಿಸಿತು. ಎಲ್ಲೆಲ್ಲಿಯೂ ಕೇಳಬರುತಲಿತ್ತು—ಈ ಕಕ್ಕನು ನನ್ನನ್ನೆ ಕೊಂಡಾಡುತ್ತಿರುವನು—ಆ ಅತ್ತೆ ನಾನೆಂದರೆ ಜೀವ ಕಳೆದು ಕೊಳ್ಳುವಳು. ನನ್ನ ಒಬ್ಬ ಭಟ್ಟಂಗಿಯು ಹೇಳಿದನು, ಪೀಟರ್ಸ್‌ಬರ್ಗಿನ ಹೆಂಗಸರಲ್ಲಿ ನನಗೆ ಸರಿಯಾದವರಿರಲಿಲ್ಲವಂತೆ. ಮತ್ತೊಬ್ಬಳು ನಾನು ಬಯ ಸಿದರೆ ಸಮಾಜದಲ್ಲಿ ನನಗೆ ಪ್ರಮುಖ ಸ್ಥಾನವು ದೊರೆಯುವುದೆಂದು ಸೂಚಿ ಸಿದಳು. ಅದರಲ್ಲಿಯೂ ನನ್ನ ಪತಿಯ ಮಧ್ಯಮ ವಯಸಿನ ಸೋದರಿಯೊ ಬ್ಬಳು ನನ್ನನ್ನು ಕಂಡ ತತ್‌ಕ್ಷಣ ನನ್ನ ಪ್ರೀತಿಯ ಸೆಳವಿಗೆ ಬಿದ್ದವಳು ನನ್ನ ತಲೆ ತಿರುಗಿಸುವಷ್ಟು ಸ್ತುತಿಸಿದಳು. ಮೊದಲ ಸಲ ನನಗೆ (ಬಾಲ) ನೃತ್ಯಕ್ಕೆ ಔತಣವಿತ್ತಾಗ ನನ್ನ ಪತಿಗೆ ಕೇಳಿದಳು—ಅವರು ನನ್ನೆಡೆಗೆ ನೋಡಿ ನ[illegible] ಹೋಗಬಯಸುವೆನೆ ಎಂದು ಕೇಳಿದಳು. ಅವರ ಮೋರೆಯ ಮೇಲೆ ಹರೇಮಿತನದ ನಗುವೊಂದನ್ನು ಕಂಡೆ--ನಾನು ಒಪ್ಪಿಗೆಗಾಗಿ ತಲೆ ಅಲ್ಲಾಡಿ ಸಿದೆ—ನಾಚಿಕೆಸಾವಾಗಿತ್ತು ನನಗೆ.

"ತನ್ನ ಇಷ್ಟವನ್ನು ತಿಳಿಸಬೇಕಾದರೂ ಆರೋಪಿತನು ತನ್ನ ಅಪರಾಧ ವನ್ನು ಒಪ್ಪಿಕೊಂಡಂತೆ ಮಾಡುವಳು," ಎಂದು ನಕ್ಕು ಬಿಟ್ಟರು.

"ನಾವು ಸಮಾಜವನ್ನು ಕಾಣಬಾರದೆಂದು ನೀವು ಹೇಳಿದ್ದು—ಅದು ನಿಮಗಿಷ್ಟವಿಲ್ಲ," ಎಂದು ನಗುತ್ತ, ಅರಚಿಕೊಳ್ಳುತ್ತ ಉತ್ತರ ಕೊಟ್ಟೆ

"ನಿನಗೆ ಹೋಗಬೇಕೆಂದಿದ್ದರೆ ಹೋಗೋಣವಂತೆ." ಅವರೆಂದರು.

"ಹಾಗಾದರೆ ಹೋಗುವುದೇ ಬೇಡ."

"ನಿನಗೆ ಹೋಗುವುದಿದೆಯೆ? ಇಷ್ಟ ಅಗತ್ಯವಿದೆಯೆ?" ಅವರು ಮತ್ತೆ ಕೇಳಿದರು.

ನಾನು ಮಾತನಾಡಲಿಲ್ಲ.

"ಯಾವ ಸಮಾಜವೂ ಅಪಾಯಕರವಲ್ಲ," ಅವರು ಹೇಳತೊಡಗಿ ದರು, "ಆದರೆ ಮನಸಿನಲ್ಲಿ ಅತೃಪ್ತ ಆಕಾಂಕ್ಷೆಗಳನ್ನಿಟ್ಟುಕೊಳ್ಳುವುದು ವಿಹಿತ ವಲ್ಲ—ಕೆಟ್ಟದ್ದು. ನಾವು ಔತಣವನ್ನು ಸ್ವೀಕರಿಸತಕ್ಕದ್ದು, ಸ್ವೀಕರಿಸೋಣ.

" ನಿಜವಾಗಿ ಹೇಳಬೇಕೆಂದಲ್ಲ. " ನಾನೆಂದೆ; " ಈ ಬಾಲಿಗೆ ಹೋಗ ಹವಣಿಸಿದಷ್ಟು ನಾನು ಯಾತಕ್ಕೂ ಇಷ್ಟು ಹವಣಿಸಿರಲಿಲ್ಲ. "

ನಾವು ಹೋದೆವು—ನನ್ನ ಹಿಗ್ಗು ನನ್ನ ಅಪೇಕ್ಷೆಯನ್ನು ಮೀರಿತು. ನಾನು ಮಧ್ಯ ಬಿಂದುವಾಗಿ ಜಗತ್ತು ನನ್ನ ಸುತ್ತಲು ತಿರುಗುತ್ತಿತ್ತೆಂದೆನಿಸಿತು ನನಗೆ—ನನಗಾಗಿಯೆ ಈ ದೀಪಗಳೂ ಈ ಸುಸ್ವರ ವಾದ್ಯಗಳೂ—ಈ ಜನರ ಸಂದಣಿಯು ನನ್ನನ್ನು ಕೊಂಡಾಡುವುದಕ್ಕೇ ನೆರೆದಿತ್ತೊ ಏನೊ. ಕೇಶ ರಚನೆ ಮಾಡುವವರನ್ನು, ಮತ್ತು ದಾಸಿಯರನ್ನು ಮೊದಲ್ಗೊಂಡು ನನ್ನ ನೃತ್ಯದ ಜೊತೆಗಾರರ ಮತ್ತು ನೃತ್ಯ ಶಾಲೆಯಲ್ಲಿ ಅಲೆದಾಡುತ್ತಿರುವ ವೃದ್ಧರ ವರೆಗೆ ನನ್ನ ಪ್ರೇಮಜಾಲದಲ್ಲಿ ಸಿಲುಕಿದರು. ನನ್ನ ಬಗೆಗೆ ಕೇಳಬಂದ ಅಭಿ ಪ್ರಾಯವೆಂದರೆ, ನಾನು ಇತರ ಹೆಂಗಸರಂತಿರಲಿಲ್ಲ. ನನ್ನಲ್ಲಿ ಹಳ್ಳಿವಾಡಿನ ( ಕೃತ್ರಿಮತೆಯಿಲ್ಲದ ) ಸೌಂದರ್ಯ ಆಕರ್ಷಣೆಯಿತ್ತು. ನನ್ನ ಪ್ರಭಾವದಿಂದ ನಾನು ಹಿಗ್ಗಿ ಹೋಗಿದ್ದೆ ನಾನು ನನ್ನ ಪತಿಗೆ ಸ್ಪಷ್ಟವಾಗಿ ಹೇಳಿದೆ, ನಾನು ಇನ್ನೂ ಎರಡು ಮೂರು ಬಾಲುಗಳಿಗೆ ಹೋಗಿ " ಬಾಯಿಗೆ ಮೊಗಚಟ್ಟು ಹಿಡಿ ಸಬೇಕೆಂದಿದ್ದೇನೆಂದು- ಆದರೆ ಹಾಗೆ ನನ್ನ ಅರ್ಥವಿರಲಿಲ್ಲ.

ಅವರು ಒಪ್ಪಿದರು; ಮೊದಮೊದಲು ಮನಸಾ ನನ್ನ ಜೊತೆಗೆ ಬಂದರು- ನನ್ನ ಪ್ರಭಾವ ನೋಡಿ ಹಿಗ್ಗಿದರು-- ತಾವು ನನಗೆ ಎಚ್ಚರ ಕೊಟ್ಟಿದ್ದನ್ನು ಮರೆತರೊ, ತಮ್ಮ ಅಭಿಪ್ರಾಯವನ್ನೆ ಬದಲಿಸಿದ್ದರೊ.

ಅವರು ಬೇಸತ್ತು ಬೇಜಾರಾಗಿ—ನಾವು ಕಳೆಯುತ್ತಿರುವ ಆಯುಷ್ಯ ಕ್ರಮವನ್ನು ನೋಡಿ ಬೇಜಾರಾಗುವ ಕಾಲ ಬಂದಿತು. ನನಗೆ ವಿಚಾರಮಾ ಡುವುದಕ್ಕೂ ವೇಳೆಯಿರಲಿಲ್ಲ—ಅಷ್ಟು ನಾನು ತೊಡಗಿ ಹೋಗಿದ್ದೆ. ಎಂದಾ ದರೊಮ್ಮೆ ಅವರು ಪ್ರಶ್ನಾರ್ಥಕ ನೋಟದಿಂದ ನನ್ನನ್ನು ನೋಡಿದಾಗ ನಾನ ದರ ಅರ್ಥವನ್ನು ಕಂಡು ಹಿಡಿಯಲಿಲ್ಲ. ನನ್ನ ಈ ಎಲ್ಲ ಪರಿಚಿತದಲ್ಲಿ ಹುಟ್ಟಿದ ಆಗತ್ಯ, ಪ್ರೇಮಗಳಿಂದ ನನ್ನ ಕಣ್ಣು ಕುರುಡಾಗಿದ್ದುವು—ಹೊಸತನ, ಝಗ ಝಗ, ವೈಭವ ಮುಂತಾದವುಗಳಿಂದ ನನ್ನ ಮನಸಿನಲ್ಲಿ ಕದಲುಬದಲಾಗಿತ್ತು. ಈ ವಾತಾವರಣದಲ್ಲಿ ನಾನವರಿಗೆ ಸರಿ—ಅಲ್ಲ ಮಿಗಿಲು ಎಂದು ತಿಳಿದು ಕೊಂಡೆ—ಈಗ ನಾನವರನ್ನು ಪ್ರೀತಿಸುವ ಬಗೆ ಬೇರೆಯದು, ಹೆಚ್ಚಿನದೆಂದು

ಭಾವಿಸಿದೆ—ನನ್ನ ಸಾಮಾಜಿಕ ಜೀವನದಲ್ಲಿ ಅವರಿಗೆ ಕಂಡುಬಂದ ಅಪಾರ್ಥ ವಾವುದೆಂಬುದನ್ನರಿಯದಾದೆ. ನಾನು ಬಾಲಿಗೆ ಹೋದ ಕೂಡಲೆ ಎಲ್ಲರ ಕಣ್ಣುಗಳು ಸೆಳೆದು ನನ್ನಲ್ಲಿ ನೆಲೆಸಿದುವೆಂದರೆ ನಾನು ಸ್ವಾಭಿಮಾನದ, ಆತ್ಮ ಸಂತೃಪ್ತಿಯ ಹೊಸ ಮಟ್ಟನ್ನು ಕಂಡುಕೊಳ್ಳುತ್ತಿದ್ದೆ—ಅವರೊ ನನ್ನ ಒಡೆಯ ರಾದುದಕ್ಕೆ ಮರುಗಿ ಅಲ್ಲಿ ನೆರೆದ ಕರಿ ನಿಲುವಂಗಿಗಳ ದಟ್ಟಣೆಯಲ್ಲಿ ಮರೆಯಾ ಗುತ್ತಿದ್ದರು. " ತುಸು ತಡೆಯಿರಿ! " ನಾನು ಕೋಣೆಯ ತುಟ್ಟತುದಿಗೆ ಅವರು ಮೋರೆಯಿಳಿಸಿಕೊಂಡು ಕಂಡರೊ ಕಾಣಲಿಲ್ಲವೊ ಎಂಬಂತೆ ಸುಳಿದಾ ಡುವುದನ್ನು ನೋಡಿ ನಾನೆಂದುಕೊಳ್ಳುತ್ತಿದೆ, " ತುಸು ತಡೆಯಿರಿ—ನಾವು ಮನೆ ಮುಟ್ಟುವವರೆಗೆ. ಆಗ ನಿಮಗೆ ತಿಳಿಯುವುದು ನಾನು ಯಾರಿಗಾಗಿ ಯಾರ ಕಣ್ಣಿನ ಅಕ್ಕರೆಗಾಗಿ ಈ ಸೌಂದರ್ಯ ಮತ್ತು ಪ್ರಭಾವವನ್ನು ಹೊಂದಿರುವೆ ನೆಂಬುದು—ಈಗ ಇಲ್ಲಿ ಕೂಡಿದ ವಸ್ತು ಮಾತ್ರಗಳಲ್ಲಿ ನಾನು ಯಾತಕ್ಕಾಗಿ ಹವಣಿಸುತ್ತಿರುವೆನೆಂಬುದು " ನನ್ನ ಈ ಪ್ರಭಾವದಲ್ಲಿ ನನಗೆ ಸಂತೋಷವಿದ್ದ ಕಾರಣವೆಂದರೆ ಅವರಿಗಾಗಿ ನಾನದನ್ನು ಬಿಟ್ಟುಕೊಡಬಹುದೆಂದು ಹೀಗೆ ನಾನು ತಿಳಿದುಕೊಂಡಿದ್ದೆ. ಇದರಲ್ಲಿ ಒಂದೆ ಒಂದು ಆತಂಕವಿತ್ತು—ನನ್ನ ಪರಿಚಿತರಲ್ಲಿ ಯಾರಿಗಾಗಿಯೊ ಮರುಳು ಹೋಗಿ ನನ್ನ ಪತಿಯ ಮತ್ಸರವನ್ನು ಕೆಣಕುವೆನೊ ಏನೊ ಎಂಬುದು. ಅವರು ನನ್ನನ್ನು ಅಷ್ಟೆ ನಂಬಿದ್ದರು—ಅವರು ಎಲ್ಲ ತರುಣರು ತಮಗೆ ಸರಿಯಾದವರಲ್ಲವೆಂದು ತಿಳಿದು ಅವರನ್ನು ದುರ್ಲಕ್ಷ್ಯ ಮಾಡುತ್ತಿದ್ದುದರಿಂದ ನನಗೆ ಆ ಆತಂಕದ ಭೀತಿಯಿರಲಿಲ್ಲ. ಆದರೂ ಇಷ್ಟು ಜನರ ಲಕ್ಷ್ಯವನ್ನು ಸೆಳೆದೆನೆಂಬುದರಲ್ಲಿ ನನಗೆ ಸಂತೃಪ್ತಿ, ನನ್ನ ಅಭಿಮಾನಕ್ಕೆ ಎಡೆ—ನನ್ನ ಪತಿಯ ಮೇಲಿದ್ದ ನನ್ನ ಪ್ರೀತಿಗೂ ಭೂಷ ಣವೆಂದೆನಿಸಿತು. ಅವರ ಕೂಡಿದ್ದ ನನ್ನ ನಡೆನುಡಿಯಲ್ಲಿ ಭಿಡೆ ಭಾರಣವಿಲ್ಲ ದಾಗಿತ್ತು—ಆತ್ಮ ಪ್ರೌಢಿಯೂ ಬೆಳೆದಿತ್ತು.

" ಇಂದು ನೀವು ಮಾದಾಮ್ ಎನ್-ಳ ಜೊತೆಗೆ ಒಳ್ಳೆ ಸವಿಸವಿ ಹರಟೆ ನಡೆಸಿಬಿಟ್ಟಿದ್ದಿರಿ, " ಬಾಲಿನಿಂದ ಒಂದು ರಾತ್ರಿ ಬಂದ ನಂತರ ಅವರೆಡೆಗೆ ಬೊಟ್ಟು ತಿವಿಯುತ್ತ ನಾನೆಂದೆ. ಆಕೆ ಪೀಟರ್ಸ್‌ಬರ್ಗಿನ ಪ್ರತಿಷ್ಠಿತ ಸಮಾ ಜದಲ್ಲಿ ಅಗ್ರಸ್ಥಾನ ವಹಿಸಿದವಳು—ಅವರು ಆಕೆಯ ಜೊತೆಗೆ ಮಾತನಾಡುತ್ತ

ನಿಂತದ್ದು ನಿಜ. ನನ್ನ ಮಾತು ಕೇಳಿ ಅವರು ಸುಮ್ಮನಿದ್ದರೂ—ವಿಷಣ್ಣರಾಗಿದ್ದರೂ—ನಾನಾದರೂ ಅವರನ್ನು ಕೆಣಕಬೇಕೆಂದೆ ಹಾಗೆಂದಿದ್ದೆ.

" ಹಾಗೆ ಮಾತನಾಡಿದರೆ—ಅದರಲ್ಲೂ ನೀನು ಹಾಗೆ ಮಾತನಾಡಿದರೆ ಬರುವುದೇನು, ಮಾಷಾ ? " ಒಳ್ಳೆಯಾಗಿ ನೊಂದುಕೊಂಡು ಹಲ್ಲು ಕಟಕರಿಸಿ ಅವರೆಂದರು. " ಆ ಮಾತು ಬೇರೆಯವರಿಗೆ ಬಿಡು ಅದು ನನಗಾಯಿತು ನಿನಗಾಯಿತು ಒಪ್ಪುವುದಿಲ್ಲ. ಬಣ್ಣದ ಮಾತು ನಮ್ಮ ನಿಮ್ಮ ಅಗತ್ಯವನ್ನು ಕದಲಿಸದಿರದು—ಆ ಹಿಂದಿನ ಅಗತ್ಯವಿನ್ನೂ ಮರಳಿ ಬರಬಹುದು. "

ನನಗೆ ನಾಚಿಕೆಯಾಗಿ ನಾನೇನೂ ಮಾತನಾಡಲಿಲ್ಲ.

" ಅದು ಮರಳಿ ಬರಬಹುದೆ, ಮಾಷಾ—ಹಾಗೆನಿಸುವುದೆ ನಿನಗೆ? " ಅವರು ಕೇಳಿದರು.

" ಅದು ಎಂದೂ ಕದಲಿರಲಿಲ್ಲ—ಮುಂದೂ ಕದಲಲಿಕ್ಕಿಲ್ಲ. " ನಾನೆಂದೆ-ಆಗ ನಾನಂತೂ ಹಾಗೆ ನಂಬಿದ್ದೆ.

" ದೇವರು ದಯಪಾಲಿಸಲಿ—ಹಾಗೇ ಆಗಲಿ! " ಅವರೆಂದರು; " ಇಲ್ಲವಾದರೆ ನಾವು ಊರಿಗೆ ಹೋಗೋಣ. "

ಅವರು ಒಮ್ಮೇ ಹಾಗೆ ಮಾತನಾಡಿದರೂ—ಸಾಮಾನ್ಯವಾಗಿ ಅವರೂ ಸುಖ ಸಮಾಧಾನದಲ್ಲಿ ಆನಂದದಲ್ಲಿದ್ದರು. ನಾನು ಸಮಾಧಾನಪಟುಗೊಂಡೆ; " ಅವರೀಗ ಕೆಲ ಸಲ ಬೇಜಾರವಾಗುತ್ತಿದ್ದರೆ ನಾನೂ ಊರಲ್ಲಿ ಅವರಿಗಾಗಿ ಬವಣಿಬಟ್ಟಿರುವೆನು. ನಮ್ಮಲ್ಲಿ ಅಗತ್ಯ ತುಸು ಕಂದಿದ್ದರೆ ಬೇಸಿಗೆಯಲ್ಲಿ ನಿಕೊಲ್‌ಸ್ಕಿಗೆ ಹೋಗಿ ಟಾಟ್ಯಾನಾ ಸಿಮ್ಯೊನೆವ್ನಳ ಜೊತೆಗೆ ನಾವೇ ನಾವಾಗಿ ಇದ್ದೆವೆಂದರೆ ಎಲ್ಲವೂ ಸರಿಹೋಗುವುದು.

ಹೀಗೆನ್ನುತಲೆ ಚಳಿಗಾಲ ಸರಿಯಿತು—ನಮ್ಮ ಮೊದಲಿನ ಯೋಜನೆಗಳನ್ನೆಲ್ಲ ಮೂಲೆಗೊತ್ತಿ ಈಸ್ಟರ ಹಬ್ಬ ಮುಗಿದರೂ ನಾವು ಪೀಟರ್ಸ್‌ಬರ್ಗಿನಲ್ಲಿಯೆ ಉಳಿದುಕೊಂಡೆವು. ಆಮೇಲೊಂದು ವಾರದ ನಂತರ ನಾವು ಹೊರಟುನಿಂತಿದ್ದೆವು. ನಮ್ಮ ಗಂಟುಗದಡಿ ಕಟ್ಟಿ ಆಗಿತ್ತು. ನನ್ನ ಪತಿಯು ಎಷ್ಟೊ ಸಾಮಾನುಗಳನ್ನು ಕೊಂಡುಕೊಂಡಿದ್ದರು-ತೋಟಕ್ಕಾಗಿ ಗಿಡದಂಟು

ಗಳನ್ನೊ-ನಿಕೊಲ್‌ಸ್ಕಿಯಲ್ಲಿ ಜನರಿಗಾಗಿ ಕಾಣಿಕೆಗಳನ್ನೊ ಆವರೀಗ ಒಳ್ಳೆಯ ಹಿಗ್ಗಿನಲ್ಲಿ ಒಳ್ಳೆಯ ಅಕ್ಕರತೆಯಲ್ಲಿದ್ದರು. ಆಗ ಪ್ರಿನ್ಸೆಸ್‌ಡಿ—ಬಂದು ನಮಗೆ ಶನಿವಾರದ ವರೆಗೆ ನಿಲ್ಲುವುದಕ್ಕೆ ಬೇಡಿಕೊಂಡಳು—ಕೌಂಟಿಸ್ ಆರ್—ಳು ಒಂದು ಸಂತೋಷ ಕೂಟವನ್ನು ಏರ್ಪಡಿಸಿದಳು ಅದಕ್ಕೆಂದು. ಕೌಂಟಿಸಳು ನನ್ನ ಬರಮಾಡಿಕೊಳ್ಳುವುದಕ್ಕಾಗಿ ಒಳ್ಳೆಯಾಗಿ ಹವಣಿಸುತ್ತಿದ್ದಳು—ಪರ ರಾಷ್ಟ್ರದ ಒಬ್ಬ ದೊಡ್ಡ ಮನುಷ್ಯನು—ಒಬ್ಬ ಪ್ರಿನ್ಸನು ನನ್ನನ್ನು ಒಂದು ಬಾಲಿನಲ್ಲಿ ನೋಡಿದ್ದನಂತೆ—ಆತನಿಗೆ ನನ್ನ ಪರಿಚಯ ಮಾಡಿಕೊಳ್ಳಬೇಕೆಂಬ ಹವಣಿಕೆಯಿತ್ತಂತೆ. ಸಂತೋಷ ಕೂಟಕ್ಕೆ ಬರುವುದಾಗಿ ಇನೊಂದೆ ಉದ್ದೇಶವಿತ್ತು ಆತನದು—ನಾನೇನೊ ಇಡಿ ರಷ್ಯದಲ್ಲಿ ಒಬ್ಬಳೆ ಚೆಲುವೆಯಂತೆ. ಇಡಿ ಜಗತ್ತು ಸಂತೋಷ ಕೂಟಕ್ಕೆ ಬರತಕ್ಕದ್ದಿತ್ತು—ಸ್ವಲ್ಪದರಲ್ಲಿ ಹೇಳಬೇಕೆಂದರೆ ನಾನೂ ಹೋಗದಿದ್ದರೆ ವಿಹಿತವಾಗುತ್ತಿರಲಿಲ್ಲ.

ನನ್ನ ಪತಿ ಯಾರ ಜೊತೆಗೊ ಮಾತನಾಡುತ್ತ ಕೋಣೆಯ ತುದಿಗೆ ನಿಂತಿದ್ದರು.

"ಹಾಗಾದರೆ ನೀನೂ ಬರುವಿ, ಅಹುದಲ್ಲವೆ, ಮೇರಿ?" ಪ್ರಿನ್ಸೆಸ್ ಳೆಂದಳು.

"ನಾವು ನಾಳಿಲ್ಲ ನಾಡಿದ್ದು ಊರಿಗೆ ಹೋಗಬೇಕೆಂದಿದ್ದೆವು." ನಾನು ಅನಿಶ್ಚಯದಿಂದ ನುಡಿದೆ ನನ್ನ ಪತಿಯೆಡೆಗೆ ನೋಡುತ್ತ ನಮ್ಮ ಕಣ್ಣುಗಳು ಕೂಡಿದುವು—ಅವರು ಮೋರೆ ತಿರುವಿದರು.

"ನಾನು ಆತನಿಗೆ (ನಿನ್ನ ಪತಿಗೆ) ನಿಲ್ಲಲಿಕ್ಕೆ ಮನವೊಲಿಸಬೇಕು." ಆಕೆಯೆಂದಳು; "ಆಮೇಲೆ ಶನಿವಾರ ಸಂತೋಷ ಕೂಟಕ್ಕೆ ಹೋಗಿ ಅಲ್ಲಿಯ ಎಲ್ಲರ ತಲೆ ತಿರುಗಿಸೋಣ. ಹೀಗೇ ಅಲ್ಲವೆ."

"ನಮ್ಮ ಈಗಿನ ವ್ಯವಸ್ಥೆ ಮಸಣಿಸುವುದು. ಗಂಟುಗದಡಿ ಕಟ್ಟಿಟ್ಟಿರುತ್ತೇವೆ." ನಾನು ಉತ್ತರ ಕೊಟ್ಟೆ—ನನ್ನ ನಿಶ್ಚಯ ಕದಲತೊಡಗಿತ್ತು.

"ಆಕೆ ಇದೆ ಸಂಜೆ ಹೋಗಿ ಪ್ರಿನ್ಸನಿಗೆ ಕ್ಷಮಾಪಣೆ ಬೇಡಿಕೊಂಡು ಬರಲಿ." ನನ್ನ ಪತಿಯು ಕೋಣೆಯ ಆಚೆಯ ದಂಡೆಯಿಂದ ನುಡಿದರು—

ಅವರ ದನಿಯಲ್ಲಿ ರೋಷವನ್ನು ಹತ್ತಿಕ್ಕಿದ್ದಂತಿತ್ತು—ಈ ವೊದಲೆಂದೂ ಹಾಗೆ ಮಾತನಾಡಿರಲಿಲ್ಲ ಅವರು.

“ಆತನಿಗಿದೆ ಮೊದಲು ಈರ್ಷ್ಯೆ ಹುಟ್ಟಿರುವುದು,” ಆಕೆ ನಕ್ಕು ನುಡಿದಳು. “ಪ್ರಿನ್ಸನಿಗಾಗಿ ನಾವು ಆಗ್ರಹಪಡುವುದಿಲ್ಲ, ಸರ್ಜ ಮಿಕ್ಯಾಲಿಕ್ಷ, ನಮಗಾಗಿ. ಕೌಂಟೆಸ್‌ಳು ಈಕೆ ಬರಬೇಕೆಂದು ಹಾಗೆ ಹವಣಿಸುವಳು”

“ಎಲ್ಲವೂ ಈಕೆಯನ್ನವಲಂಬಿಸಿದೆ,” ಎಂದು ಭಾವ ಶೂನ್ಯವಾಗಿ ಹೇಳಿ ಅವರು ಕೋಣೆ ಬಿಟ್ಟು ಹೋದರು.

ಅವರು ಉದ್ವಿಗ್ನರಾಗಿದ್ದರೆಂದು ನನಗೆ ಕಂಡಿತು—ಅದು ನನಗೆ ನೋಯಿಸಿತು. ನಾನು ನಿಶ್ಚಿತವಾಗಿ ಯಾವ ಅಭಿವಚನವನ್ನೂ ಕೊಡಲಿಲ್ಲ. ನಮ್ಮನ್ನು ಕಾಣಬಂದವಳು ಹೋದ ಬಳಿಕ ನಾನು ನನ್ನ ಪತಿಯೆಡೆಗೆ ಹೊರಟೆ. ಅವರು ವಿಚಾರದಲ್ಲಿ ಮಗ್ನರಾಗಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡತೊಡಗಿದ್ದರು— ನಾನು ತುದಿಗಾಲಮೇಲೇ ಹೋದುದರಿಂದ ನಾನು ಕೋಣೆಯಲ್ಲಿ ಬಂದುದನ್ನಾಗಲಿ ನೋಡಲಿಲ್ಲ ನನ್ನ ಕಾಲ ಸಪ್ಪಳವನ್ನಾಗಲಿ ಕೇಳಲಿಲ್ಲ.

ಅವರೆಡೆಗೆ ನೋಡಿ ನಾನೆಂದುಕೊಂಡೆ “ಈವರೀಗಾಗಲೆ ನಿಕೊಲ್‌ಸ್ಕಿಯ ಕನಸನ್ನು ಕಾಣುತ್ತಿರುವರು—ಆ ಝುಗಝುಗಿಸುವ ದಿವಾಣಖಾನೆಯಲ್ಲಿ ನಮ್ಮ ಮುಂಜಾವಿನ ಕಾಫಿ—ಭೂಮಿಗಳು, ಆಳುಗಳೂ—ಸಂಗೀತ ಶಾಲೆಯಲ್ಲಿಯ ನಮ್ಮ ಸಂಜೆ—ನಡು ರಾತ್ರಿಯಲ್ಲಿ ನಾವು ಕದ್ದೊಯ್ದು ತಿಂಡಿ ತಿನಸುಗಳು—” ಆಮೇಲೆ ನನ್ನ ಮನಸಿನಲ್ಲಿ ನಿರ್ಧಾರ ಮಾಡಿಕೊಂಡೆ,” ಅವರ ಈ ಹಿಗ್ಗನ್ನು—ಈ ಆಕ್ಕರತೆಯನ್ನು ಯಾವ ಬಾಲಿಗಾಗಿ, ಯಾವ ಪ್ರಿನ್ಸನಸ್ತುತಿಗಾಗಿ ನಾನು ಮಸಣಿಸಲಾರೆನು—“ಬಾಲಿನ ಔತಣವನ್ನು ಬಿಟ್ಟೆ—ಬಾಲಿಗೆ ಹೋಗುವುದಿಲ್ಲವೆಂದು ಹೇಳಬಯಸಿಡೆ—ಆಗ ಅವರು ನನ್ನೆಡೆಗೆ ನೋಡಿ ಮೋರೆ ಕಿವುಚಿದರು. ಅವರ ಮೋರೆ ಅಕ್ಕರೆಯಿಂದ ತುಂಬಿದ್ದು, ವಿಚಾರದಲ್ಲಿ ಮಗ್ನವಾದದ್ದು ಒಮ್ಮೆಲೆ ಬದಲಾಗಿ ಅಲ್ಲಿ ಮೇಧಾವಿತ್ವ—ಇತರರ ಬಗೆಗೆ ತುಚ್ಛತೆ ಒಡಮೂಡಿತು. ನನ್ನೆದುರಿಗೆ ಮಾನವರೆಂದು ನಿಲ್ಲಲಾರದು—ಪೀಠ ಪ್ರಭಾವಳಿಯಲ್ಲಿ ಅವಿತ ದೇವ ಪುರುಷರಾಗಿ ಪ್ರಕಟಿಸಬೇಕಲ್ಲ.

“ ಮತ್ತೇನು ? ” ಅವರು ನನ್ನೆಡೆಗೆ ನೋಡಿ ನಿರ್ಲಿಪ್ತ ಭಾವದಿಂದ ಕೇಳಿದರು.

ನಾನು ಮಾತನಾಡಲಿಲ್ಲ. ನಾನು ರೊಚ್ಚಿಗೆದ್ದಿದ್ದೆ—ಅವರು ನಾನು ಪ್ರೀತಿಸುತ್ತ ಬಂದ ವ್ಯಕ್ತಿಯಾಗಿ ಉಳಿಯದೆ ತಮ್ಮ ತಮ್ಮ ವ್ಯಕ್ತಿತ್ವವನ್ನು ನನ್ನಿಂದಡಗಿಸಬೇಕೆಂದರು.

“ ಶನಿವಾರ ದಿನ ಈ ಸಂತೋಷ ಕೂಟಕ್ಕೆ ಹೋಗಬೇಕೆಂದಿದ್ದಿಯಾ ? ” ಅವರು ಕೇಳಿದರು

“ ಹೋಗಬೇಕೆಂದಿದ್ದೆ—ಆದರೆ ನಿಮಗದಿಷ್ಟವಿಲ್ಲವಲ್ಲ. ಗಂಟುಗದ ಡಿಯೂ ಕಟ್ಟಿ ಆಗಿದೆ. ” ನಾನೆಂದೆ.

ಅವರ ದನಿಯಲ್ಲಿ ಇಂಥ ಉಕ್ಷತೆಯನ್ನು ಈ ಮೊದಲು ನಾನೆಂದೂ ಕೇಳಿರಲಿಲ್ಲ—ಅವರ ಕಣ್ಣಲ್ಲಿಯೂ ಇಂಥ ನಿಷ್ಠುರತೆಯನ್ನು ಕಂಡಿರಲಿಲ್ಲ.

“ ಗಂಟು ಬಿಚ್ಚಲಿಕ್ಕೆ ಹೇಳುತ್ತೇನೆ, ” ಅವರೆಂದರು; “ ನಾನು ಮಂಗಳ ವಾರದವರೆಗೆ ನಿಲ್ಲುತ್ತೇನೆ. ನೀನು ಸಂತೋಷ ಕೂಟಕ್ಕೆ ಹೋಗಬಹುದು- ನೀನು ಹೋಗಬಹುದು, ನಾನು ಮಾತ್ರ ಹೋಗಲಾರೆ. ”

“ ನಿಮ್ಮ ಮಾತಿನ ಅರ್ಥವಾಗಲೊಲ್ಲದು ನನಗೆ, ” ನಾನು ನಿಂತಲ್ಲಿಂದ ಅವರೆಡೆಗೆ ನೋಡುತ್ತ ನುಡಿದೆ; “ ನೀವು ಮನಸ್ಸಿನ ನಿಶ್ಚಲತೆಯನ್ನು ಕವಲಿಸ ಗೊಡುವುದಿಲ್ಲ ಹೇಳುವಿರಿ ಮಾತ್ರ— ” ( ಅವರು ಹಾಗೆಂದೂ ಹೇಳರಲಿಲ್ಲ )— “ ಹಾಗಾದರೆ ಹೀಗೆ ವಿಚಿತ್ರವಾಗಿ ಏಕೆ ಮಾತನಾಡುವಿರಿ ? ನಾನು ನಿಮಗಾಗಿ ಇದೆಲ್ಲವನ್ನು ಬಿಟ್ಟುಕೊಡಲು ಸಿದ್ಧಳಿದ್ದೇನೆ, ಆದರೆ ನೀವು ಕೊಂಕು ನುಡಿ ಯಿಂದ ( ಇದು ನನಗೆ ಹೊಸದು ) ನನಗೆ ಹೋಗಲೆಬೇಕೆಂದು ಆಗ್ರಹ ಪಡುವಿರಿ. ”

“ ಬಿಟ್ಟುಕೊಡಲು ಸಿದ್ಧಳಿದ್ದಿ ! ” ಅವರು ಒತ್ತಿ ಒತ್ತಿ ಹೇಳಿದರು; “ ನಾನು ಕೆಲವು ಮಾತುಗಳನ್ನು ಬಿಟ್ಟುಕೊಟ್ಟಿರುವೆನು ಮತ್ತೇನು ಬೇಕು ? ಉದಾರತನದಲ್ಲಿ ಒಬ್ಬರನ್ನೊಬ್ಬರು ಹಿಂದೆ ಹಾಕಬೇಕೆಂದಿದ್ದೇವೆ—ಮನೆಯ ಸುಖಶಾಂತಿಗೆ ಮತ್ತೆಂಥ ಉದಾಹರಣೆ ಬೇಕಿದೆ ! ”

ಇಷ್ಟು ನಿರ್ದಾಕ್ಷಿಣ್ಯವಾದ ತಿರಸ್ಕಾರದ ನುಡಿಯನ್ನು ನಾನವರ ಬಾಯಿಂದ ಕೇಳಿರಲಿಲ್ಲ ಅವರ ಮಾತಿನಿಂದ ನಾನು ಖತಿಗೊಳ್ಳಲಿಲ್ಲ—ಅವರ ತಿರಸ್ಕಾರದಿಂದ ಮಾನ ಮುಕ್ಕಾದವಳಾದೆ; ಅವರ ಬಿರಿನುಡಿಯಿಂದ ಭಯಪಡಲಿಲ್ಲ—ನಾನೂ ಅಷ್ಟೆ ನಿಷ್ಠುರಳಾದೆ ಅವರು ಹೀಗೆ ಮಾತನಾಡಿದರಾದರೂ ಹೇಗೆ?—ತಾವು ಇದುವರೆಗೆ ಸರಲ ಭಾವದಿಂದ ಮಾತನಾಡುವವರು,—ಒಬ್ಬರಿಗೊಬ್ಬರ ಮಾತಿನಲ್ಲಿ ಸರಲ ಭಾವವೆಲ್ಲಿ ಅಳಿದು ಹೋಗುವುದೊ ಎಂದು ಮರಗುವವರು ಅವರು ತಾವು ಇಷ್ಟು ಬಿರಿನುಡಿಯಿಂದ ಮಾತನಾಡುವಷ್ಟು ನಾನೇನಂಥ ಪಾಪ ಮಾಡಿದ್ದೆ? ಅವರಿಗಾಗಿ ಒಂದು ಆಮೋದ ಪ್ರಮೋದವನ್ನು ನಾನು ಬಿಟ್ಟುಕೊಡಬೇಕೆಂದಿದ್ದೆ. ಒಂದು ಕ್ಷಣದ ಹಿಂದೆ ನಾನವರನ್ನು ಪ್ರೀತಿಸುತ್ತಿದ್ದೆ—ಅವರ ಭಾವಗಳನ್ನರಿತುಕೊಂಡಿದ್ದೆ. ನಾವು ಈಗ ಮಾತ್ರ ನಮ್ಮ ಪರಸ್ಪರ ಭೂಮಿಕೆಗಳನ್ನು ಬದಲಿಸಿದ್ದೆವು. ಈಗವರು ಸರಲವಾದ ನೇರವಾದ ಮಾತಿಗೆ ಚಾಟಿಕೊಟ್ಟರು—ನಾನೆ, ಅಂಥ ಮಾತಿಗಾಗಿ ಹವಣಿಸುತ್ತಿದ್ದೆ.

"ನಿಮ್ಮಲ್ಲಿ ಬಹಳ ಬದಲಾಗಿದೆ," ನಾನು ಸಿಟ್ಟುಸಿರು ಬಿಟ್ಟು ನುಡಿದೆ; ನಾನು ಅಂಥದೇನು ಪಾಪ ಮಾಡಿದ್ದು? ಈ ಔತಣವಲ್ಲ,—ಏನೊ ಹಳೆಯ ಲೆಕ್ಕಾಚಾರವಿದೆ ನಿಮ್ಮ ಮನಸಿನಲ್ಲಿ—ಈ ಮುಚ್ಚು ಮರೆಯೇತಕ್ಕೆ? ಈ ಮುಚ್ಚು ಮರೆಗಾಗಿ ನೀವು ಅಂಜುತ್ತಿದ್ದಿರಿ. ನನ್ನ ತಪ್ಪು ಸ್ಪಷ್ಟವಾಗಿ ನನ್ನ ಪದರಿನಲ್ಲಿ ಹಾಕಿರಿ."—"ಈಗೇನು ಹೇಳುವರು?" ನಾನೆಂದುಕೊಂಡೆ—ಆ ಇಡಿ ಚಳಿಗಾಲ ನಾನು ಹುಡುಕಿದರೂ ತಪ್ಪು ಸಿಗದು ಎಂದು ಸಮಾಧಾನ ಪೂರ್ವಕವಾಗಿ ಯೋಚಿಸಿದೆ.

ನಾನು ಕೋಣೆಯ ಮಧ್ಯ ಭಾಗಕ್ಕೆ ಹೋಗಿ ನಿಂತೆ—ಅವರು ನನ್ನ ಹತ್ತಿರದಿಂದಲೆ ಹಾಯ್ದು ಓಡಾಡಬೇಕಾಗುತ್ತಿತ್ತು ನಾನವರೆಡೆಗೆ ನೋಡಿ ನುಡಿದುಕೊಂಡೆ, "ಅವರು ಬಂದು ನನ್ನನ್ನಪ್ಪಿಕೊಳ್ಳುವರು—ಎಲ್ಲವೂ ಸರಿಯಾಗುವುದಾಮೇಲೆ." ಅವರ ತಪ್ಪು ಸಿಗದಾದ್ದರಿಂದ ನೊಂದುಕೊಂಡೆ. ಅವರು ಕೋಣೆಯ ಆಚೆಯ ತುದಿಗೆ ನಿಂತು ನನ್ನೆಡೆಗೆ ನೋಡಿದರು.

"ಇನ್ನೂ ತಿಳಿಯಲಾರವೆ ನಿನಗೆ?" ಅವರು ಕೇಳಿದರು.

" ಇಲ್ಲ—ನನಗೆ ತಿಳಿಯದು. "

" ನಾನೆ ತಿಳಿಸಿ ಹೇಳಬೇಕೆಂದಾಯಿತು ಹಾಗಾದರೆ. ನನಗೇನೆನಿಸು ವುದೊ—ಹಾಗೆನಿಸುವುದು ಸಹಜವಿದೆ—ಅವರಿಂದ ನನಗೆ ನೋವಾಗುತ್ತಿದೆ ನನ್ನ ಜನ್ಮದಲ್ಲಿ ಇದೆ ಮೊದಲು. " ಅವರು ಸುಮ್ಮನಾದರು—ತಮ್ಮ ದನಿ ಯಿಂದ ತಾವೆ ಚಕಿತರಾಗಿ.

" ಇದರರ್ಥ? " ಕಣ್ಣುಗಳಿಂದ ಸಂತಾಪದ ಕಣ್ಣೀರು ಸುರಿಸುತ್ತ ಕೇಳಿದೆ.

" ಪ್ರಿನ್ಸನು ನಿನ್ನನ್ನು ಹೊಗಳಿದನೆಂದು ಕೇಳಿ ನನಗದೆಂಥ ನೋವು— ನೀನೆ—ನಿನ್ನಲ್ಲಿಯ ಈ ಶಾಲೀನತೆಯ ಅಭಾವವನ್ನು ನೋಡಿ ನಿನ್ನ ಗಂಡನಿ ಗೇನೆನಿಸುವುದೆಂಬುದನ್ನು ಬೇಕೆಂದು ವಿಪರೀತವಾಗಿ ತಿಳಿದುಕೊಳ್ಳುವಿ—ಆತ ನೆಡೆಗೆ ಬಂದು, 'ಅದನ್ನು ಬಿಟ್ಟುಕೊಟ್ಟೆ, ಇದನ್ನು ಬಿಟ್ಟುಕೊಟ್ಟೆ' ಎಂದು ಹೇಳುತ್ತಿರುವಿ—ಅರ್ಥವಿಷ್ಟೆ,—" ರಾಜಕುಮಾರನ ಭೆಟ್ಟಿಯಲ್ಲಿ ನನಗೆ ಪರಮ ಸಂತೋಷ, ಅದನ್ನು ನಾನು ಬಿಟ್ಟುಕೊಟ್ಟಿರುವೆನು, ಎಂದು "

ಅವರು ಮಾತನಾಡುತ್ತ ಹೋದಂತೆ ಅವರ ದನಿ ರುಕ್ಷ, ಒರಟು ನಿಷ್ಠುರವಾಗತೊಡಗಿತು— ಅವರ ಸಂತಾಪವೇರಿತು—ಅವರನ್ನು ಹಾಗೆ ಸಂತ ಪ್ತರಾದುದನ್ನು ನಾನೆಂದೂ ನೋಡಿರಲಿಲ್ಲ-ನೋಡುವೆನೆಂದೆಣಿಸಿರಲಿಲ್ಲ ನನ್ನ ಎದೆಗೆ ರಕ್ತ ಬಂದು ತಟ್ಟಿತು—ನನಗೆ ಭೀತಿಯೆನಿಸಿತು. ನನ್ನ ಮೋರೆಗೆ ಮಸಿ ಹತ್ತುವಂಥ ಯಾವ ಕೆಲಸವನ್ನೂ ನಾನು ಮಾಡಿರಲಿಲ್ಲ—ನನ್ನ ಸ್ವಾಭಿ ಮಾನವನ್ನು ಕೆಣಕಿದುದಕ್ಕೆ ಪ್ರಾಯಶ್ಚಿತ್ತ ಕೊಡಬೇಕೆಂದು ಮಾಡಿದೆ.

" ಇದನ್ನು ನಾನು ಎಣಿಸಿಯೆ ಇದ್ದೆ " ನಾನೆಂದೆ; " ಸಾಗಲಿ-ಸಾಗಲಿ- "

" ನೀನೇನು ಎಣಿಸಿದ್ದಿಯೊ ನಾನರಿಯೆ, " ಅವರು ನುಡಿದರು; " ನಾನು ಇದಕ್ಕೂ ಹೆಚ್ಚಿನ ದುರ್ಲೌಕಿಕವನ್ನೆಣಿಸುತ್ತೇನೆ ನೀನು ಈ ಮೂಢ ಸಮಾ ಜದ ಹೇಸಿತನ, ಆಲಸ್ಯ, ವಿಲಾಸಲೋಲುಪತೆಗಳಲ್ಲಿ ಬೆರೆತುಕೊಂಡದ್ದನ್ನು ನೋಡಿ. ಇಷ್ಟು ದುಃಖ, ಇಷ್ಟು ನಾಚಿಕೆ ನನಗೆಂದೂ ಅನುಭವಕ್ಕೆ ಬಂದಿರ ಲಿಲ್ಲ. ನನಗಾಗಿ ದುಃಖ—ಆ ನಿನ್ನ ಗೆಳತಿ ತನ್ನ ಹೇಸಿ ಕೈಯಿಂದ ನನ್ನ

ಹೃದಯವನ್ನು ತಿವಿದು ನನ್ನ ಈರ್ಷ್ಯೆ ತೆಗೆಯುವಳು—ನಾನೂ ನೀನೂ ಎಂದೂ ನೋಡದವನಿಗಾಗಿ ಈರ್ಷ್ಯೆಯಂತೆ!—ನೀನು ನನ್ನ ಮನಸ್ಥಿತಿಯನ್ನು ತಿಳಿದುಕೊಳ್ಳಬಯಸುವುದಿಲ್ಲ–'ತ್ಯಾಗ'ದ ಮಾತನಾಡುವಿ—ತ್ಯಾಗ!–ನನಗೆ ನಿನಗಾಗಿ—ನಿನ್ನ ಅವನತಿಗಾಗಿ ನಾಚಿಕೆಯೆನಿಸುತ್ತಿದೆ—ತ್ಯಾಗ! ಅವರು ಮತ್ತೆ ಮತ್ತೆ ನುಡಿದರು.

"ಅಂತೂ ಇದೆ ಗಂಡನ ಅಧಿಕಾರ,-" ನಾನು ಯೋಚಿಸಿದೆ. "ಎಳ್ಳಷ್ಟೂ ತಪ್ಪು ಮಾಡದ ಹೆಂಗಸಿನ ಅಪಮಾನ–ಆಕೆಯನ್ನು ತಲೆಯೆತ್ತದಂತೆ ಮಾಡುವುದು. ಗಂಡನ ಅಧಿಕಾರ ಅದಿರಬಹುದು—ನಾನದಕ್ಕೆ ಒಳಗಾಗತಕ್ಕವಳಲ್ಲ." ನನ್ನ ಮೋರೆಯ ಮೇಲಿನ ರಕ್ತವೆಲ್ಲ ಬಳಿದು ಹೋದಂತೆನಿಸಿತು—ಮೂಗಿನ ಸೊಳ್ಳೆಗಳು ಹಿಗ್ಗಿದುವು—ನಾನು ನುಡಿದೆ; "ಇಲ್ಲ—ನಿಮಗಾಗಿ ನಾನು ಯಾವ ತ್ಯಾಗವನ್ನೂ ಮಾಡಲಾರೆ. ಶನಿವಾರ ದಿನ ತಪ್ಪದೆ ಸಂತೋಷ ಕೂಟಕ್ಕೆ ಹೋಗುವೆನು "

"ಮತ್ತು ಅಲ್ಲಿ ತೃಪ್ತಿಪಡುವಿ ಎಂದು ಆಶಿಸುತ್ತೇನೆ. ಇನ್ನು ಮುಂದೆ ನಮ್ಮಿಬ್ಬರ ಸಂಬಂಧ ಕಡಿದಂತಾಯಿತು!" ಅಸುಗೊಳ್ಳಲಾರದ ಸಿಟ್ಟಿನಿಂದ ಅವರು ಕಿರಿಚಿಕೊಂಡರು. ಇನ್ನು ಸಾಕು ನನ್ನನ್ನು ಪೀಡಿಸುವುದು! ನಾನು ಮೂರ್ಖನಾಗಿದ್ದೆ ನಿನ್ನನ್ನು—" ಅವರ ತುಟಿಗಳದುರಿದುವು-- ಅವರು ವಾಕ್ಯವನ್ನು ಪೂರ್ಣ ಮಾಡುವ ಗೋಜಿಗೆ ಹೋಗಲಿಲ್ಲ.

ನಾನು ಭೀತಿಗೊಂಡೆ—ಆಕ್ಷಣ ಅವರ ಬಗೆಗೆ ದ್ವೇಷ ತುಂಬಿತು ನನ್ನ ಮನಸಿನಲ್ಲಿ ನನ್ನ ಅಪಮಾನ ಮಾಡಿದ್ದಕ್ಕೆ ಪ್ರಾಯಶ್ಚಿತ್ತ ಕೊಡಬೇಕೆಂದು—ಬಾಯಿಗೆ ಬಂದಂತೆ ಮಾತನಾಡಿಕೊಳ್ಳಬೇಕೆಂದೆಣಿಸಿದೆ. ನಾನು ಬಾಯಿಬಿಟ್ಟಿದ್ದರೆ—ಆದರೆ ಕಣ್ಣಲ್ಲಿ ನೀರು ನನ್ನ ಅಭಿಮಾನವಳಿದು ಹೋಗುವುದೆಂದು ಭೀತಿಗೊಂಡೆ. ನಾನು ಮಾಡಲಿಲ್ಲ—ಕೋಣೆಯನ್ನು ಬಿಟ್ಟು ಹೊರಗೆ ನಡೆದೆ. ಅವರ ಕಾಲ ಸಪ್ಪಳ ಕೇಳದಂತಾದ ಕೂಡಲೆ ನಾವೇನು ಮಾಡಿ ಕುಳಿತೆವೆಂದು ಭೀತಿಯಾಯಿತು ನನಗೆ. ನನ್ನ ಸುಖದ ಆಧಾರವಾಗಿದ್ದ ಬಂಧನವೆಲ್ಲ ಹರಿದು ಹೋಯಿತೊ ಏನೊ ಎಂದೆನಿಸಿತು. ಮರಳಿ ಹೋಗಬೇಕೆಂದೆ. ಆಗ ಯೋಚಿಸಿಕೊಂಡೆ, "ನಾನು ಕೈ ಜೋಡಿಸಿ ಅವರೆಡೆಗೆ ಹೋದರೆ ಅವರು ನನ್ನ ಭಾವ

ಗಳನ್ನು ತಿಳಿದುಕೊಳ್ಳುವಷ್ಟು ಶಾಂತರಾಗಿರಬಹುದೆ? ನನ್ನ ಮನಸಿನ ದೊಡ್ಡಿಸ್ಥಿತಿಯನ್ನು ಲೆಕ್ಕಿಸುವರೆ? ನನ್ನ ದುಃಖವೆಲ್ಲ ಬರಿ ಸೋಗು ಎಂದರೆ? ತಾವು ಮಾಡಿದ್ದೆಲ್ಲ ಸರಿ ಎಂದು ತಿಳಿದು ನನ್ನ ಪಶ್ಚಾತ್ತಾಪಕ್ಕೆ ಒಪ್ಪಿಗೆಯಿತ್ತು ತಮ್ಮ ಅಭಿಮಾನ ಕಡಿಮೆ ಮಾಡದೆ ನನ್ನನ್ನು ಕ್ಷಮಿಸಲೂಬಹುದು. ಆದರೆ—ಆದರೆ ನಾನವರನ್ನಿಷ್ಟು ಪ್ರೀತಿಸಿದಾಗ್ಯೂ ಹೀಗೆ ನಿಷ್ಠುರವಾಗಿ ನನ್ನ ಮಾನ ತೆಗೆಯುವುದೇಕೆ?"

ನಾನವರೆಡೆಗೆ ಹೋಗದೆ ನನ್ನ ಕೋಣೆಗೆ ಹೋದೆ. ಅಲ್ಲಿ ಕುಳಿತು ಎಷ್ಟೋ ಹೊತ್ತು ಅತ್ತೆ-ನಮ್ಮಿಬ್ಬರ ಸಂಭಾಷಣೆಯಲ್ಲಿಯ ಪ್ರತಿಯೊಂದು ಶಬ್ದವನ್ನು ನೆನಪಿಗೆ ತಂದುಕೊಂಡೆ ನಾವು ಮಾತನಾಡಿದ ಶಬ್ದಗಳ ಬದಲಾಗಿ-ಬೇರೆ ಮೆತ್ತನ ಶಬ್ದಗಳನ್ನು ಹಾಕಿದೆ—ಇನ್ನೂ ಬೇರೆ ಕೆಲ ಶಬ್ದಗಳನ್ನು ಜೋಡಿಸಿದೆ. ಆಮೇಲೆ ಆದ ಸಂಗತಿಯನ್ನೆಲ್ಲ ನೆನೆದುಕೊಂಡಾಗ ಭೀತಿಯಾಯಿತು—ವ್ಯಥೆಯಾಯಿತು. ಸಂಜೆಗೆ ಚಹಾ ಪಾನಕ್ಕಾಗಿ ಹೋದಾಗ ನನ್ನ ಪತಿಯು ನಮ್ಮ ಒಬ್ಬ ಆಪ್ತ ಮಿತ್ರರೊಡನೆ ಮಾತನಾಡುತ್ತ ಕುಳಿತಿದ್ದರು—ಅವರು ನಮ್ಮ ಜೊತೆಗೇ ಇದ್ದರು. ಅಂದಿನಿಂದ ನಮ್ಮಿಬ್ಬರಲ್ಲಿ ಒಂದು ದೊಡ್ಡ ಅಂತರಾಯ ಬೆಳೆದು ನಿಂತಿದೆ ಎಂದೆನಿಸಿತು ನನಗೆ. ನಮ್ಮ ಮಿತ್ರರು ಯಾವಾಗ ಹೊರಡುವುದೆಂದು ನನ್ನನ್ನು ಕೇಳಿದರು—ನಾನು ಮಾತನಾಡುವ ಮೊದಲೆ ನನ್ನ ಪತಿಯು ಉತ್ತರ ಕೊಟ್ಟರು.

"ಮಂಗಳವಾರ" ಅವರೆಂದರು. "ನಮಗೆ ಕೌಂಟೆಸ್ ಆರ್-ಳಲ್ಲಿ ಸಂತೋಷ ಕೂಟಕ್ಕೆ ಹೋಗುವುದಿದೆ." ನನ್ನೆಡೆಗೆ ತಿರುಗಿ ಕೇಳಿದರು. "ನೀನು ಹೋಗಬೇಕೆಂದಿರುವಿ ಅಲ್ಲವೆ?"

ಅವರ ಸ್ವಾಭಾವಿಕವಾದ ದನಿಯು ನನ್ನನ್ನಂಜಿಸಿತು—ನಾನವರೆಡೆಗೆ ನೋಡಿದೆ. ಅವರು ನಿಷ್ಠುರವಾಗಿ ತಿರಸ್ಕಾರದ ನೋಟವೊಂದನ್ನು ನೇರವಾಗಿ ನನ್ನೆಡೆಗೆ ಎಸೆದರು. ಅವರ ದನಿ ಶಾಂತವಾಗಿದ್ದರೂ ಸ್ನೇಹಶೂನ್ಯವಾಗಿತ್ತು.

"ಆಹುದು." ನಾನು ಉತ್ತರ ಕೊಟ್ಟೆ.

ಅಂದು ಸಂಜೆಗೆ ನಾವಿಬ್ಬರೆ ಉಳಿದಾಗ ಅವರು ನನ್ನೆಡೆಗೆ ಬಂದು ತಮ್ಮ ಕೈ ಮುಂದೆ ಮಾಡಿದರು.

"ಇಂದು ನಾನು ಆಡಿದ ಮಾತನ್ನೆಲ್ಲ ಮರೆತುಬಿಡು." ಅವರು ಪ್ರಾರಂಭಿಸಿದರು.

ನಾನು ಅವರ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಂಡಾಗ ನನ್ನ ತುಟಿಯಮೇಲೆ ಮುಗುಳು ಮಿಂಚಿತು-ಕಣ್ಣಲ್ಲಿ ನೀರು ತುಂಬಿ ನಿಂತಿದ್ದುವು; ಅವರು ತಮ್ಮ ಕುರ್ಚಿಯಮೇಲೆ ಕುಳಿತರು—ಅಳುವ ಕರೆಯುವ ಪ್ರಸಂಗ ಬರಬಹುದೆಂಬ ಭೀತಿಯೊ ಏನೊ. "ಇನ್ನೂ ತಮ್ಮ ಮಾತೇ ಸರಿಯಾದು ದೆಂದು ತಿಳಿದುಕೊಂಡಿರಬಹುದೆ?" ನಾನು ಯೋಚಿಸುತ್ತಿದ್ದೆ. ಎಲ್ಲವನ್ನೂ ತಿಳಿಸಿ ಹೇಳಿ ನಾವು ಸಂತೋಷಕೂಟಕ್ಕೆ ಹೋಗುವ ಕಾರಣವಿಲ್ಲವೆಂದು ಕೇಳಿ ಕೊಳ್ಳಲಿಕ್ಕೆ ಸಿದ್ಧಳಿದ್ದೆ-ಆದರೆ ಶಬ್ದಗಳು ನನ್ನ ನಾಲಗೆಯ ಮೇಲೇ ಆರಿದುವು.

ನಾವು ಹೊರಡುವುದು ಮುಂದೆ ಬಿದ್ದಿತೆಂದು ನಮ್ಮ ತಾಯಿಗೆ ಪತ್ರ ಬರೆದು ತಿಳಿಸಬೇಕು; "ಅವರೆಂದರು;" ಇಲ್ಲವಾದರೆ ಆಕೆ ತೊಂದರೆಗೊ ಳ್ಳಬಹುದು.

"ನೀವು ಎಂದು ಹೋಗಬೇಕೆಂದು ಮಾಡಿರುವಿರಿ?" ನಾನು ಕೇಳಿದೆ.

"ಮಂಗಳವಾರ—ಸಂತೋಷಕೂಟವನ್ನು ತೀರಿಸಿಕೊಂಡು." ಅವರು ಉತ್ತರ ಕೊಟ್ಟರು.

"ಇದೆಲ್ಲ ನನ್ನಗೋಸುಗ ಅಲ್ಲವೆಂದು ಆಶಿಸುತ್ತೇನೆ," ಅವರ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ನಾನೆಂದೆ. ಆ ಕಣ್ಣುಗಳು ನೋಡುತ್ತಿದ್ದುವಷ್ಟೆ—ಏನೂ ಹೇಳುತ್ತಿರಲಿಲ್ಲ-ಒಂದು ತೆರೆಯಾಚೆ ಅಡಗಿದಂತೆ ನನಗೆ ತೋರಿದುವು ಅವರ ಮೋರೆಯಮೇಲೊಮ್ಮಿಂದೊಮ್ಮೆಲೆ ಮುದಿತನ ಮೂಡಿತು-ನೋಡಲು ಅಪ್ರಿಯವಾದುದೆಂದಾಯಿತು.

ನಾವು ಸಂತೋಷಕೂಟಕ್ಕೆ ಹೋದೆವು—ನಮ್ಮಿಬ್ಬರ ಸಂಬಂಧ ಸರಿಪ ಟ್ಟಂತೆ ತೋರಿತು—ಆದರೆ ಅದರಲ್ಲಿ ಆ ಹಿಂದಿನ ಅಂದವಿರಲಿಲ್ಲ.

ಸಂತೋಷಕೂಟದಲ್ಲಿ ನಾನು ಉಳಿದ ಕೆಲ ಹೆಂಗಸರೊಂದಿಗೆ ಕುಳಿ ತಿದ್ದೆ—ಆಗ ಪ್ರಿನ್ಸನು ನನ್ನೆಡೆಗೆ ಬಂದನು—ಆತನೊಂದಿಗೆ ಮಾತನಾಡಬೇ ಕಾದರೆ ನಾನು ಎದ್ದು ನಿಲ್ಲಬೇಕಾಯಿತು. ನಾನು ಎದ್ದು ನಿಲ್ಲುವಾಗ ನನ್ನ

ಕಣ್ಣುಗಳು ಸ್ವಾಭಾವಿಕವಾಗಿ ನನ್ನ ಪತಿಯನ್ನು ಹುಡುಕುತ್ತ ಅವರಿದ್ದಲ್ಲಿ ತಿರುಗಿದುವು. ಕೋಣೆಯ ಆಚೆಯ ದಂಡೆಯಿಂದ ಅವರು ನನ್ನೆಡೆಗೆ ನೋಡುತ್ತಿದ್ದರು—ನನ್ನ ಕಣ್ಣು ಬಿದ್ದ ತತ್‌ಕ್ಷಣ ಮೋರೆ ತಿರುವಿದರು. ನನ್ನ ಹೃದಯದಲ್ಲಿ ನಾಚಿಕೆ, ನೋವು ಪ್ರಿನ್ಸನು ನೋಡುತ್ತಿರುವಾಗಲೆ ನನ್ನ ಮೋರೆ ನನ್ನ ಕುತ್ತಿಗೆ ಕೆಂಪೇರಿ ಹೋದುವು. ನಾನು ಆತನ ಮಾತು ಕೇಳುತ್ತ ನಿಲ್ಲಬೇಕಾಯಿತು—ಆತನು ತನ್ನ ಎತ್ತರ ನೋಡುತ್ತ ಮಾತನಾಡುತ್ತಿದ್ದ. ನಮ್ಮ ಮಾತು ಕತೆ ಆಗಲೆ ಮುಗಿದುವು. ಆತನಿಗೆ ನನ್ನೆಡೆಗೆ ಸ್ಥಾನವಿರಲಿಲ್ಲ—ಆತನೊಂದಿಗೆ ಮಾತನಾಡುವುದು ಅಪ್ರಶಸ್ತವಾಗತೊಡಗಿತೆಂಬುದು ಆತನಿಗೆ ಹೊಳೆಯಿತು. ನಾವು ಹಿಂದಿನ ಒಂದು ಬಾಲು—ನಾನು ಬೇಸಿಗೆಯನ್ನೆಲ್ಲಿ ಕಳೆಯಬೇಕೆಂದಿರುವೆ ಎಂದು ಮುಂತಾಗಿ ಮಾತನಾಡಿದೆವು. ನನ್ನ ಅಪ್ಪಣೆ ತೆಗೆದುಕೊಂಡು ಹೋಗುವಾಗ ನನ್ನ ಪತಿಯ ಪರಿಚಯ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯನ್ನಾಡಿ ತೋರಿಸಿದನು—ಕೋಣೆಯ ಆಚೆಯ ದಂಡೆಗೆ ಅವರು ಭೆಟ್ಟಿಯಾಗಿ ಮಾತು ಕತೆಗೆ ಮೊದಲ ಮಾಡಿದ್ದು ನಾನು ನೋಡಿದೆ. ಆತನು ನನ್ನ ಬಗೆಗೆ ಏನೊ ಹೇಳುತ್ತಿರುವಂತಿತ್ತು—ಮಾತಿನ ಓಘದಲ್ಲಿ ಆತನು ನನ್ನೆಡೆಗೆ ನೋಡಿ ನಕ್ಕ.

ನನ್ನ ಪತಿಯು ರೇಗಿದರು. ಆತನಿಗಭಿವಂದಿಸಿ ಆತನ ಅಪ್ಪಣೆಪಡೆದುಕೊಳ್ಳದೆ ಹೊರಟುಬಿಟ್ಟರು—ನನಗೆ ನಾಚಿಕೆಸಾವಾಯಿತು. ನನ್ನ ವಿಶೇಷವಾಗಿ ನನ್ನ ಪತಿಯ ನಡೆ ನುಡಿಯಿಂದ ಪ್ರಿನ್ಸನು ಏನು ತಿಳಿದುಕೊಂಡಿರಬೇಕು! ನನ್ನ ಪರಚಯ ಮಾಡಿಕೊಟ್ಟಾಗಿನ ನನ್ನ ಮುಟ್ಟಲಮುರುಕತನ ಎಲ್ಲರಿಗೂ ಕಂಡುಬಂದಿರಬೇಕು—ಹಾಗೂ ನನ್ನ ಪತಿಯ ವಿಚಿತ್ರತನ. "ನಮ್ಮ ಈ ನಡೆ ನುಡಿಯಿಂದ ಜನರು ಏನೆಂದು ತಿಳಿದುಕೊಳ್ಳುವರೊ ದೇವರೆ ಬಲ್ಲ. ನಾನು ನನ್ನ ಪತಿಯೊಂದಿಗೆ ವಾದ ಹಾಕಿದ್ದು ಈ ಮೊದಲೆ ಗೊತ್ತಾಗಿದ್ದೀತವರಿಗೆ."

ಪ್ರಿನ್ಸೆಸ್‌ಡಿ—ನನ್ನನ್ನು ಮನೆಗೆ ಮುಟ್ಟಿಸಿದಳು. ದಾರಿಯಲ್ಲಿ ನನ್ನ ಪತಿಯ ವಿಷಯ ಹೇಳಿದೆ. ನನ್ನ ಶಾಂತತೆಯುಳಿದು ಹೋಗಿತ್ತು—ಈ ದೈವಗೇಡಿ ಸಂತೋಷಕೂಟದ ಮೂಲಕ ನಮ್ಮಿಬ್ಬರಲ್ಲಿ ನಡೆದ ಜಗಳದ ಬಗೆಗೆ

ಷೇಟಿಡ. ಆಕೆ ನನ್ನನ್ನು ಸಮಾಧಾನಗೊಳಿಸುವುದಕ್ಕಾಗಿ ಇಂಥ ಜಗಳಗಳು ಸಾಮಾನ್ಯ. ವಿಶೇಷ ಮಹತ್ತ್ವವಿಲ್ಲದುವು, ಮುಂದೆ ಆಯುಷ್ಯ ಯಾವ ಬಗೆಯಿಂದಲೂ ಕುರುಹುಗಳನ್ನೆತ್ತಲಾರವೆಂದು ಹೇಳಿದಳು ನನ್ನ ಪತಿಯು ಸ್ವಭಾವದ ಬಗೆಗೆ ತನ್ನ ಅಭಿಪ್ರಾಯವನ್ನು ಹೇಳಿದಳು—ಅವರೀಗ ಮಾತು ಕತೆ ಬೇಡಾದವರೂ ಜನರ ಕೂಡ ನಡೆದುಕೊಂಡು ಹೋಗದವರೂ ಎಂದು. ನಾನು ಒಪ್ಪಿಕೊಂಡೆ—ನಾನವರ ಬಗೆಗೆ ಶಾಂತವಾಗಿಯೂ ಸ್ವತಂತ್ರವಾಗಿಯೂ ವಿಚಾರ ಮಾಡಿ ಕೆಲ ನಿರ್ಧಾರಕ್ಕೆ ಬಂದಿರುವೆನೆಂದೂ ಹೇಳಿದೆ.

ನಂತರ ನಾನು ನನ್ನ ಪತಿಯೊಂದಿಗೆ ಒಬ್ಬಳೆ ಇದ್ದಾಗ ಅವರ ನಡೆನುಡಿಯ ಬಗೆಗೆ ನ್ಯಾಯಾಧೀಶನಂತೆ ನಿರ್ಣಯಿಸುವುದು ಅಪರಾಧವೆಂದು ನನ್ನ ವಿವೇಕ ಬುದ್ಧಿಗೆ ತೋಚಿತು. ನಮ್ಮಿಬ್ಬರ ನಡುವಿನ ಅಂತರಾಯವು ಇನ್ನೂ ಬೆಳೆದು ಬಿಟ್ಟಂತೆನಿಸಿತು—

## ಪರಿಚ್ಛೇದ ೮

ಅಂದಿನಿಂದ ನಮ್ಮ ಜೀವನಕ್ರಮದಲ್ಲಿ, ನಮ್ಮಿಬ್ಬರಲ್ಲಿಯ ಋಣಾನುಬಂಧದಲ್ಲಿ ತೀರ ಬದಲಾಯಿತು. ಮೊದಲಿನಂತೆ ನಾವಿಬ್ಬರೆ ಉಳಿದಾಗ ನಮಗೆ ಅಷ್ಟು ಸಂತೋಷವೆನಿಸುತ್ತಿರಲಿಲ್ಲ—ಕೆಲವು ವಿಷಯಗಳಿಗೆ ನಾವು ಹರವಾಗಿ ಅನುವು ಕೊಡುತ್ತಿದ್ದೆವು—ಮೂರನೆಯವರಿದ್ದಾಗ ನಮ್ಮ ಮಾತುಕತೆ ಸುಸೂತ್ರ ಸಾಗುತ್ತಿತ್ತು. ಹಳ್ಳಿವಾಡಿನಲ್ಲಿಯ ಜೀವನಕ್ರಮ ಇಲ್ಲವೆ ಬಾಲು ಮುಂತಾದ ವಿಷಯಗಳನ್ನೊಳಗೊಂಡು ಮಾತು ಹೊರಟಾಗ ನಾವು ತತ್ತರಿಸುತ್ತಿದ್ದೆವು—ಒಬ್ಬರನ್ನೊಬ್ಬರು ನೋಡುವುದಕ್ಕೂ ಹಿಂಜರಿಯುತ್ತಿದ್ದೆವು. ನಮ್ಮಿಬ್ಬರ ನಡುವಿದ್ದ ಅಂತರಾಯವೆಲ್ಲಿರಬೇಕೆಂಬುದನ್ನು ಇಬ್ಬರೂ ಅರಿತಿದ್ದೆವು—ಅದನ್ನು ಸಮೀಪಿಸುವ ಧೈರ್ಯ ಇಬ್ಬರಿಗೂ ಇರಲಿಲ್ಲ. ಅವರು ಒಳ್ಳೆಯ ಅಭಿಮಾನಿಗಳೂ ತಮ್ಮ ಶಕವನ್ನೆ ನಡೆಯಿಸುವವರೆಂದು ನನ್ನ ಮನಸಿನ ನಿರ್ಧಾರವಾಯಿತು—ಅವರ ಐಬುಗಳಿಗೆ ಎಳ್ಳಷ್ಟು ಧಕ್ಕೆ ತಗಲದಂತೆ ನಾನು ಎಚ್ಚರದಿಂದಿರುತ್ತಿದ್ದೆ. ನನಗೆ ಹಳ್ಳಿವಾಡಿನಲ್ಲಿ ಸೇರಿಕೆಯಿಲ್ಲ—ನನಗೆ

ಉಚ್ಚ ಸಮಾಜದಲ್ಲಿ ಹೋಗುವುದೂ ಬರುವುದೂ ಬೇಕು ಎಂದು ಅವರಿಗೂ ಗೊತ್ತಿತ್ತು—ಈ ನನ್ನ ಖೇದಕರವಾದ ಒಲುವಿಗಾಗಿ ಅವರದರೆಡೆಗೆ ದುರ್ಲಕ್ಷ ಮಾಡಲೆಬೇಕಾಗಿತ್ತು—ಈ ವಿಷಯಗಳ ಬಗೆಗೆ ನಾವು ಸ್ಪಷ್ಟ ಮಾತನಾಡುವುದನ್ನೆ ಬಿಟ್ಟೆವ—ಒಬ್ಬರಿಗಾಗಿ ಒಬ್ಬರು ತಪ್ಪು ತಿಳಿವಳಿಕೆ ಮಾಡಿಕೊಂಡೆವು. ಪೂರ್ಣತೆಯನ್ನು ಹೊಂದಿದವರೆಂದು ತಿಳಿದುಕೊಳ್ಳುವುದನ್ನು ಬಿಟ್ಟು ರಹಸ್ಯವಾಗಿ ಜಗತ್ತಿನಲ್ಲಿಯ ಉಳಿದವರೊಂದಿಗೆ ಹೋಲಿಸಿ ಒಬ್ಬರ ತಪ್ಪು ಒಬ್ಬರು ಎಣಿಸತೊಡಗಿದೆವು. ಪೀಟರ್ಸ್‌ಬರ್ಗ್ ಬಿಡುವ ಮೊದಲು ನಾನು ಜಡ್ಡು ಬಿದ್ದೆ. ಪಟ್ಟಣಕ್ಕೆ ಸಮೀಪದಲ್ಲಿಯೆ ಮತ್ತೊಂದು ಮನೆಗೆ ನಿಲ್ಲಲಿಕ್ಕೆ ಹೋದೆವು—ಅಲ್ಲಿಂದ ನನ್ನ ಪತಿಯು ತಾಯಿಯ ಬಳಿ ನಿಕೊಲ್ಸ್ಕಿಗೆ ಒಬ್ಬರೆ ಹೋದರು. ಆಗ ನಾನು ಅವರೊಂದಿಗೆ ಹೋಗುವಷ್ಟು ನೆಟ್ಟಗಾಗಿದ್ದೆ—ಆದರೆ ನನ್ನ ಆರೋಗ್ಯದ ನೆವ ಹೇಳಿ ನನಗೆ ಹಿಂದೆ ಉಳಿಯಲಿಕ್ಕೆ ಹೇಳಿದರು. ನಾವು ಹಳ್ಳಿವಾಡಿನಲ್ಲಿ ಕೂಡಿ ಇರುವುದು ಇಬ್ಬರಿಗೂ ಅಸಮಾಧಾನವನ್ನುಂಟುಮಾಡಬಹುದೆಂಬ ಅಂಜಿಕೆ ಅವರಿಗೆ ಇತ್ತೆಂದು ನನಗೆ ಗೊತ್ತಿತ್ತು. ನಾನು ವಿಶೇಷ ಆಗ್ರಹ ಹಿಡಿಯಲಿಲ್ಲ—ಅವರು ಒಬ್ಬರೆ ಹೊರಟರು. ಅವರ ಹಿಂದೆ ನನಗೆ ಬೇಸರ, ಒಂಟಿಗತನವೆನಿಸತೊಡಗಿತು. ಅವರು ಮರಳಿ ಬಂದಾಗ ಮೊದಲಿನಂತೆ ನನ್ನ ಜೀವನಕ್ಕೆ ಪೂರ್ಣತೆ ಬಂದಂತೆನಿಸಲಿಲ್ಲ. ಮೊದಲು ನನ್ನ ಪ್ರತಿಯೊಂದು ವಿಚಾರ, ಅನುಭವ ಅವರಿಗೆ ತಿಳಿಸದಿದ್ದರೆ ನಾನು ತಪ್ಪು ಮಾಡಿದಂತೆನಿಸುತ್ತಿತ್ತು. ಅವರ ಪ್ರತಿಯೊಂದು ಕೃತಿ, ಪ್ರತಿಯೊಂದು ಶಬ್ದ ಸಂಪೂರ್ಣತೆಯ ಮಾದರಿಯೆಂದು ತೋರುತ್ತಿತ್ತು. ಒಬ್ಬರ ಕಣ್ಣಿಗೆ ಒಬ್ಬರು ಬಿದ್ದ ಕೂಡಲೆ ಹಿರಿ ಹಿಗ್ಗಿ ಕುಲು ಕುಲು ನಗುತ್ತಿದ್ದೆವು. ಆದರೆ ಈ ನಮ್ಮ ಅಗತ್ಯವು ನಮ್ಮನ್ನರಿಯದೆ ಇಲ್ಲದಂತಾಯಿತು—ಇಲ್ಲದಂತಾದುದನ್ನೂ ನಾವು ಕಾಣಲಿಲ್ಲ. ನಾವು ಒಬ್ಬರಿಗೊಬ್ಬರು ಸಹ ಭಾಗಿಗಳಾಗದೆ ಅನುಭವಿಸುವ ಹೊಸ ಅನುವು ಆಪತ್ತುಗಳು ಹುಟ್ಟಿದುವು. ನಮ್ಮಿಬ್ಬರಲ್ಲಿ ಹುಟ್ಟಿದ ಪರಕೀಯ ಭಾವ ನಮಗೆ ತೊಂದರೆ ಕೊಡದೆ ಹೋಯಿತು. ಆ ಕಲ್ಪನೆಯ ರೂಢಿಯಾಯಿತು—ಒಂದು ವರುಷ ಮುಗಿಯುವುದರೊಳಗಾಗಿ ಒಬ್ಬರನ್ನೊಬ್ಬರು ಕಂಡಾಗ ಯಾವ ಬಗೆಯ ಕಾತರತೆಯೂ ಹುಟ್ಟುತ್ತಿರಲಿಲ್ಲ. ನನ್ನ ಜೊತೆಗೆ ಅವರು ಆಡುತ್ತಿದ್ದ ಹುಡುಗಾಟ, ನಗೆಯಾಟಗಳೆಲ್ಲ ಕಾಣದಂತಾ

ದುವು— ಸಾಗಿದ್ದೆಲ್ಲ ಸಾಗಲಿ ಎಂದು ಶಾಂತವಾಗಿ ನೋಡುವ ಅವರ ವೃತ್ತಿ— ಅದನ್ನು ಕಂಡು ನನಗೆ ರೇಗುತ್ತಿತ್ತು— ಅದೀಗ ಇಲ್ಲದಂತಾಗಿತ್ತು. ನನ್ನನ್ನು ಭ್ರಮೆಗೊಳಿಸುವ, ಕುಲು ಕುಲು ನಗಿಸುವ ಆ ನೇರವಾದ ನೋಟ— ಆ ಆನಂದದ ಭರ— ಆ ಪ್ರಾರ್ಥನೆಯಲ್ಲಿಯ ಆಗತ್ಯ— ಸಹ ಸಂವೇದನೆಯಿಲ್ಲದೆ ಮುಕ್ತಾಯ ಹೊಂದಿದುವು. ನಮ್ಮ ಭೆಟ್ಟಿಯಾದರೂ ಅಂದೊಮ್ಮೆ ಇಂದೊಮ್ಮೆ; ಅವರು ಮನೆಯಲ್ಲಿ ಇರುತ್ತಿರಲೆ ಇಲ್ಲ— ಅಲ್ಲಿ ನನ್ನನ್ನು ಒಬ್ಬಳನ್ನೆ ಬಿಟ್ಟು ಹೋದುದಕ್ಕಾಗಿ ಕಾತರ, ಮರುಕ ಯಾವುದೂ ಇರಲಿಲ್ಲ ನಾನೂ ಹಗಲಿರುಳು ನಾಲ್ಕು ಜನರಲ್ಲಿ ಬೆರೆತುಕೊಳ್ಳುತ್ತಿದ್ದುದರಿಂದ ನನಗವರ ಆವಶ್ಯಕತೆಯೆನಿಸುತ್ತಿರಲಿಲ್ಲ.

ಆ ಮುಂದೆ ನಮ್ಮಲ್ಲಿ ವಾದ, ಜಗಳಗಳೇನೂ ಆಗಲಿಲ್ಲ. ನಾನವರನ್ನು ಸಂತೋಷಿಸುವ ಯತ್ನದಲ್ಲಿರುತ್ತಿದ್ದೆ— ಅವರು ನನ್ನ ಇಚ್ಛೆಗಳನ್ನೆಲ್ಲ ಪೂರೈಸುತ್ತಿದ್ದರು— ನಾವು ಒಬ್ಬರನ್ನೊಬ್ಬರು ಪ್ರೀತಿಸುವಂತಿತ್ತು.

ನಾವಿಬ್ಬರೆ ಉಳಿದಾಗ— ಹಾಗೆ ಎಂದೊ ಒಮ್ಮೆ ಆಗುತ್ತಿತ್ತು— ಅವರ ಸಾಂನಿಧ್ಯದಲ್ಲಿ ನನಗೆ ಆನಂದ. ಉಲ್ಲಾಸ, ಸಂತೃಪ್ತಿ, ಯಾವೂ ಆಗುತ್ತಿರಲಿಲ್ಲ. ಒಂಟಿಗಳಾಗಿಯೆ ಉಳಿದಂತೆನಿಸುತ್ತಿತ್ತು. ಅವರು ನನ್ನ ಪತಿ— ಪರಕೀಯರಲ್ಲ— ಒಳ್ಳೆಯ ಸಜ್ಜನರು— ನನಗೆ ನನ್ನ ಪರಿಚಯವಿದ್ದಷ್ಟು ಅವರ ಪರಿಚಯವೂ ಇದೆ ಎಂದು ನಾನರಿತಿದ್ದೆ. ಅವರು ಇನ್ನು ಮಾತಾಡುವರೇನು, ಮಾಡುವರೇನು ಎಂಬುದನ್ನು ತತ್‌ಕ್ಷಣ ತಿಳಿದುಕೊಳ್ಳಬಲ್ಲೆನೆಂದು ನಿರ್ಧರಿಸಿದ್ದೆ. ಅವರು ಏನಾದರೂ ಮಾಡಿದುದಕ್ಕೆ ನನಗೆ ಆಶ್ಚರ್ಯವೆನಿಸಿದಾಗ ಅವರು ಮಾಡಿದ್ದು ತಪ್ಪು ಎಂದು ಧಾರಾಳವಾಗಿ ತಿಳಿದುಕೊಳ್ಳುತ್ತಿದ್ದೆ. ನಾನವರಿಂದ ಏನನ್ನೂ ಅಪೇಕ್ಷಿಸುತ್ತಿರಲಿಲ್ಲ. ಒಂದೆ ಶಬ್ದದಲ್ಲಿ ಹೇಳಬೇಕಾದರೆ, ಅವರು ನನ್ನ ಪತಿ— ಇಷ್ಟೆ. ಹಾಗಿದ್ದುದು ಕ್ರಮಪ್ರಾಪ್ತವೆ ಸರಿ— ಇದಕ್ಕೂ ಬೇರೆ ಯಾವ ಸಂಬಂಧವಿರಲಿಲ್ಲವೆಂಬುದಾಗಿ ನನ್ನ ಮನವರಿಕೆಯಾಯಿತು. ಮೊದಮೊದಲು ಅವರು ಮನೆ ಬಿಟ್ಟು ಹೋದರೆಂದರೆ, ನನಗೆ ಒಂಟಿಗತನದಿಂದ ಭಯುಷ್ಟಂಟಾಗಿ ಯಾರಾದರೂ ಜೋಡಿಗೆ ಬೇಕೆನಿಸುತ್ತಿತ್ತು. ಅವರು ಬಂದ ಕೂಡಲೆ ಅರಿಕಿಗ್ಗಿ ನಾನವರ ಕೊರಳ ಸೇರುತ್ತಿದ್ದೆ— ಎರಡು ತಾಸಿನ ನಂತರ ಕೇಳಿದರೆ ಆ ಹಿಗ್ಗು ಮರೆಯಾಗಿರುತ್ತಿತ್ತು— ನನಗೊ

ಮಾತನಾಡಲಿಕ್ಕೆ ಶಬ್ದಗಳೇ ಉಳಿಯುತ್ತಿರಲಿಲ್ಲ. ಒಮ್ಮೊಮ್ಮೆ—ಅದೆಂದೊ,—ನಮ್ಮಲ್ಲಿ ಹೊರದೋರಿಕೆಯಿಲ್ಲದ ಪ್ರೀತಿ ಹುಟ್ಟಿರುತ್ತಿತ್ತು—ನನ್ನ ಹೃದಯದಲ್ಲಿ ಏನೊ ಒಂದು ಅಪರಾಧದ, ನೋವಿನ ಅರಿಕೆ—ಅವರ ನೋಟದಲ್ಲಿಯೂ ಅದೆ ಕತೆ ಅವರ ಸಲುಮೆಗೊಂದು ಒಡ್ಡು—ಅದನ್ನವರು ದಾಟಲರಿಯರೆಂದು ನನ್ನ ಮನವರಿಕೆಯಾಗಿತ್ತು—ಅವರಂತೆ ನಾನೂ. ನನಗಿದರಿಂದ ದುಃಖವಾಗುತ್ತಿತ್ತು. ವಿಚಾರ ಮಾಡಲಿಕ್ಕೆ ನನಗೆ ವೇಳೆಯಿರಲಿಲ್ಲ. ನನ್ನ ಅಸಮಾಧಾನವನ್ನು ಮರೆಯಿಸಬೇಕೆಂದು ನಾನು ನನಗೆ ಸಾಧ್ಯವಿದ್ದ ವಿನೋದನಗಳಲ್ಲಿ ತೊಡಗುತ್ತಿದ್ದೆ. ನನ್ನ ಆತ್ಮ ಪ್ರೀತಿಗೆ ಸಲ್ಲುವ, ನನ್ನನ್ನು ಹೊಳಪು ಒಪ್ಪಗಳಿಂದ ಕಣ್ಣು ಕುಕ್ಕಿಸುವ ಜಿಡಗಿನ ಬಾಳು ನನ್ನ ಸ್ವಭಾವದಲ್ಲಿ ನೆಲೆಸಿತು—ರೂಢಿಯಪಾಯಿತು— ತನ್ನ ಸೆರೆಯಾಳಾಗಿ ಮಾಡಿತು—ನನ್ನ ಭಾವನೆಗಳಿಗನುವು ಕೊಡುವ ಶಕ್ತಿಯನ್ನು ಮರೆಮಾಚಿಸಿತು; ನನಗೆ ಏಕಾಕಿಯಾಗಿರುವುದು ಬೇಕಿರಲಿಲ್ಲ. ನನ್ನ ಸ್ಥಿತಿಗತಿಯ ವಿಚಾರ ಭೀತಿಪ್ರದವಾಗಿತ್ತು. ನನ್ನ ಇಡಿ ದಿನ—ಮುಂಜಾವಿನಿಂದ ಸಂಜೆಯ ವರೆಗೆ—ಜನರಲ್ಲಿ ಬೆರೆತು ಸಾಗುತ್ತಿತ್ತು. ನಾನು ಮನೆಯಲ್ಲಿದ್ದಾಗಲೂ ನನ್ನ ವೇಳೆ ನನ್ನ ತಂತ್ರದಲ್ಲಿರುತ್ತಿರಲಿಲ್ಲ. ಈ ಆಯುಷ್ಯಕ್ರಮ ವಿಶೇಷ ಆನಂದದ್ದೂ ಅಲ್ಲ, ಬೇಸರದ್ದೂ ಅಲ್ಲ—ಅದು ಹಾಗೆ ಸಾಗಬೇಕಿತ್ತು—ಉಳಿದ ಯಾವ ಬಗೆಯಿಂದ ಸಾಗುತ್ತಿರಲಿಲ್ಲ—ನಡೆದಿತ್ತೆಂದೆನಿಸಿತು.

ಮೂರು ವರುಷಗಳು ಸಾಗಿನುವು—ನಮ್ಮಿಬ್ಬರಲ್ಲಿಯ ಸಂಬಂಧ ಬದಲಾಗದೆ ಉಳಿಯಿತು—ಒಂದ ಒಂದು ಸ್ಥಿರ ರೂಪ ತಾಳಿತು—ಕೆಟ್ಟೂ ಅಲ್ಲ ನೆಟ್ಟೂ ಅಲ್ಲ ಎಂದೆನಿಸಿತು. ಈ ಅವಾಂತರದಲ್ಲಿ ಎರಡು ಮಹತ್ತ್ವದ ಸಂಗತಿಗಳೊದಗಿ ಬಂದುವು—ಎರಡರಿಂ ಲೂ ನನ್ನ ಆಯುಷ್ಯದಲ್ಲಿ ಬದಲಾಗಲಿಲ್ಲ. ಅವುಗಳೆಂದರೆ, ನನ್ನ ಚೊಚ್ಚಲ ಮಗುವಿನ ಹುಟ್ಟು, ಟಾಟ್ಯಾನಾ ಸಿಮ್ಯೊನೊವ್ನಳ ಸಾವು. ಮೊದ ಮೊದಲು ಈ ತಾಯಿತನವು ನನ್ನನ್ನು ದೃಢವಾಗಿ ಅಂಟುಕೊಂಡಿತು—ನನ್ನಲ್ಲಿ ಅನಪೇಕ್ಷಿತ ಆನಂದವನ್ನುಂಟುಮಾಡಿತು—ಇದೆ ಹೊಸ ಆಯುಷ್ಯಕ್ಕೆ ಮೊದಲಾಗಬಹುನೆಂದು ನಾನು ನಂಬಿದ್ದೆ. ಎರಡು ತಿಂಗಳುಗಳಲ್ಲಿ ಆ ಭಾವನೆ ಬಳಲಿ ಬಳಲಿ ಒಂದು ರೂಢಿಯಾಯಿತು—ಒಂದು ಸತ್ತ್ವಹೀನ ಕರ್ತವ್ಯವಾಯಿತು. ನನ್ನ ಪತಿಯು ಮಾತ್ರ ನಮ್ಮ ಚೊಚ್ಚಲ

ಗಂಡು ಹುಟ್ಟಿದಂದಿನಿಂದ ಮತ್ತೆ ಮೊದಲಿನ ಸ್ವಭಾವವುಳ್ಳವರಾದರು—ಮನೆ ನಂಬಿದವರೂ ಶಾಂತರೂ ಹೆಣ್ಣು ಕರುಳಿನವರೂ—ಅವರು ತಮ್ಮ ಹಿಗ್ಗು ಕಕ್ಕುಲತೆಗಳನ್ನು ಮಗುವಿನ ಪಾಲಿಗೆ ನೀಡಿದ್ದರು. ಎಷ್ಟೋ ಸಲ ರಾತ್ರಿ ಬಾಲಿಗೆ ಹೋಗುವ ಮೊದಲು ನಾನು ನಮ್ಮ ಕಂದನಿಗೆ ಕ್ರೂಸಿನಿಂದ ಆಶೀರ್ವದಿಸುವುದಕ್ಕೆಂದು ಮಕ್ಕಳ ಕೋಣೆಗೆ ಹೋದಾಗ ನನ್ನ ಪತಿಯು ಅಲ್ಲಿಯೆ ಇರುತ್ತಿದ್ದರು—ಆ ಕಣ್ಣುಗಳ ಗಾಂಭೀರ್ಯದ ನೋಟದಾಚೆ ಹೀಯಳಿಗೆ ಮರೆಯಾಗಿರುತ್ತಿತ್ತು. ನನಗೆ ನಾಚಿಕೆಯಾಗುತ್ತಿತ್ತು—ನನ್ನ ಕಟುಕತನ ನೋಡಿ ನಾನೆ ಹೌಹಾರಿದವಳಾಗುತ್ತಿದ್ದೆ—ನಾನು ಉಳಿದ ಹೆಂಗಸರಿಗೂ ಕಡೆಯೆ! ಎಂದು ನನ್ನನ್ನೆ ಕೇಳಿಕೊಳ್ಳುತ್ತಿದ್ದೆ. "ಇದರ ಹೊರ್ತು ಗತಿಯಿಲ್ಲ," ನಾನೆಂದುಕೊಳ್ಳುತ್ತಿದ್ದೆ; "ನಾನು ನನ್ನ ಕಂದನನ್ನು ಪ್ರೀತಿಸುವುದೇನೊ ನಿಜ—ಆದರೆ ಆತನನ್ನು ಹೊಲಿದುಕೊಂಡು ಕುಳಿತುಕೊಳ್ಳುವುದು ಬೇಸರಿಯುವ ಮಾತೆ ಸರಿ. ನನ್ನ ಮನಸಿನಲ್ಲಿಲ್ಲದ ಭಾವನೆಯನ್ನು ಸುಳ್ಳೆ ತೋರಿಸಲಿಕ್ಕೆ ನನಗೆ ಬಾರದು."

ನನ್ನ ಪತಿಗೆ ತಮ್ಮ ತಾಯಿಯ ಸಾವಿನಿಂದ ಅತಿಯಾಗಿ ದುಃಖವಾಯಿತು; ನಿಕೊಲ್‌ಸ್ಕಿಗೆ ಹೋಗಿ ಇರುವುದು ದುಃಖದಾಯಕವಾಯಿತವರಿಗೆ. ನಾನು ದುಃಖಪ್ರದರ್ಶನ ಮಾಡಿ ನನ್ನ ಪತಿಗೆ ಸಹಾನುಭೂತಿ ತೋರಿಸಿದರೂ ಆಕೆಯ ಸಾವಿನ ನಂತರ ಅಲ್ಲಿಯ ಜೀವನವು ಹೆಚ್ಚು ಸುಸೂತ್ರವೂ ಆನಂದಮಯವೂ ಎಂದು ತೋರಿತು ನನಗೆ. ಈ ಮೂರು ವರುಷಗಳಲ್ಲಿ ನಾವು ಬಹುಕಾಲ ಪಟ್ಟಣಗಳಲ್ಲಿ ಇದ್ದೆವು. ನಾನು ನಿಕೊಲ್‌ಸ್ಕಿಗೆ ಒಮ್ಮೆ, ಅದು ಎರಡು ತಿಂಗಳುಗಳ ಮಟ್ಟಿಗೆ, ಹೋಗಿದ್ದೆ. ಮೂರನೆಯ ವರುಷ ನಾವು ಪರದೇಶಕ್ಕೆ ಹೋದೆವು—ಬೇಸಿಗೆಯನ್ನು ಬೇಡನ್ನಿನ್ನಲ್ಲಿ ಕಳೆದೆವು.

ಆಗ ನನ್ನ ವಯಸು ಇಪ್ಪತ್ತೊಂದು; ನಮ್ಮ ಆರ್ಥಿಕ ಪರಿಸ್ಥಿತಿ, ನನ್ನ ನಂಬುಗೆಯ ಮಟ್ಟಿಗೆ, ಸಮಾಧಾನಕರವಿತ್ತು ಕೌಟುಂಬಿಕ ಜೀವನದಲ್ಲಿ ನನಗೆ ಬೇಡಿದುದು ಸಿಕ್ಕುತ್ತಿತ್ತು. ನನ್ನ ಪರಿಚಿತರೆಲ್ಲರೂ ನನ್ನ ಮೇಲೆ ಪ್ರೀತಿ. ನನ್ನ ಆರೋಗ್ಯ ಚೆನ್ನಾಗಿತ್ತು. ಉಡುಪು ತೊಡವುಗಳಲ್ಲಿ ಬೇಡನ್ನಿಗೆ ನಾನೆ ಮಿಗಿಲು. ನಾನು ಚೆಲುವೆಯೆಂಬುದು ನಾನರಿತಿದ್ದೆ. ಉಚ್ಚ ಸಂಸ್ಕಾರದ,

ಸೌಂದರ್ಯದ ಆ ವಾತಾವರಣದಲ್ಲಿ ನಾನು ನಲಿದಾಡುತ್ತಿದ್ದೆ. ಸ್ವಲ್ಪದರಲ್ಲಿ ಹೇಳುವುದೆಂದರೆ ನಾನು ಒಳ್ಳೆಯ ಉಲ್ಲಾಸದಲ್ಲಿದ್ದೆ. ನಿಕೊಲ್‌ಸ್ಕಿಯಲ್ಲಿ ನನ್ನ ಉಲ್ಲಾಸವಿನ್ನೂ ಹೆಚ್ಚಿತ್ತು—ನನ್ನ ಸುಖ ನನ್ನ ಕೈಯಲ್ಲಿಯೆ ಇತ್ತು—ನನಗೆ ಸುಖ ಸಿಕ್ಕತಕ್ಕದೆಂಬ – ಭಾವನೆ ನನಗೆ ಹೆಚ್ಚಿನ ಸುಖ ದೊರೆಯಬಹುದೆಂಬ ಅಪೇಕ್ಷೆ ಇವೆ ಆ ಸುಖಕ್ಕೆ ಕಾರಣಗಳಾಗಿದ್ದುವು ಆ ಮನಸ್ಥಿತಿ ಬೇರೆ; ಈ ಬೇಸಗೆಯೂ ಸುಸೂತ್ರ ಸಾಗಿತು. ನನಗೆ ವಿಶಿಷ್ಟ ಆಶೆಗಳಿರಲಿಲ್ಲ, ಅಪೇಕ್ಷೆಗಳಿರಲಿಲ್ಲ, ಮರುಕವಿರಲಿಲ್ಲ; ನನ್ನ ಜೀವನವು ಸಂಪೂರ್ಣ, ನನ್ನ ಮನಸು ನಿರ್ಮಲ ಎಂದು ತೋರಿತು. ಬೇಡನ್ನಿಗೆ ಬಂದವರಲ್ಲಿ ಉಳಿದವರನ್ನು ಬಿಟ್ಟು ಇಂಥವನನ್ನು ನಾನು ವಿಶೇಷ ಕೊಂಡಾಡುತ್ತಿದ್ದೆನೆಂದಿರಲಿಲ್ಲ—ಎಲ್ಲರಲ್ಲಿ ನಮ್ಮ ರಸ್ಯದ ವೃದ್ಧ ರಾಯಭಾರಿಗಳಾದ ಪ್ರಿನ್ಸಕೆ–ಯವರೂ ಬಂದರು—ಅವರು ಒಳ್ಳೆಯ ಆಸ್ಥೆಯಿಂದ ನನ್ನನ್ನು ನೋಡಿಕೊಳ್ಳುತ್ತಿದ್ದರು. ಒಬ್ಬನು ಹರೆಯದವನಿದ್ದರೆ, ಮತ್ತೊಬ್ಬ ಮುದುಕ; ಒಬ್ಬನು ತಿಳಿಬಣ್ಣದ ಇಂಗ್ರಜನಿದ್ದರೆ ಮತ್ತೊಬ್ಬನು ಗಡ್ಡಬಿಟ್ಟ ಫ್ರೆಂಚನು—ನನಗೊ, ಎಲ್ಲರೂ ಅಷ್ಟೆ, ನನ್ನ ಸುತ್ತ ಇರಲೆಬೇಕಾದವರು. ಒಬ್ಬರಂತೆ ಒಬ್ಬರಿದ್ದ ಅವರು ನನಗೆ ಬೇಕಾದ ರಂಜನೆಯ ವಾತಾವರಣವನ್ನು ನಿರ್ಮಾಣ ಮಾಡುತ್ತಿದ್ದರು. ಅವರಲ್ಲಿಯೂ ಒಬ್ಬನು—ಆತನೊಬ್ಬ ಇಟಾಲಿಯನ ಮಾರ್ಕ್ವಿಸ್—ತನಗೆ ನನ್ನ ಬಗೆಗೆ ಇದ್ದ ಆಸ್ಥೆ ಅಪೇಕ್ಷೆಗಳನ್ನು ದಿಟ್ಟತನದಿಂದ ಆಡಿ ತೋರಿಸುವವನು ಉಳಿದವರನ್ನು ಬಿಟ್ಟು ಎದ್ದು ಕಾಣುತ್ತಿದ್ದನು. ನನ್ನ ಜೊತೆಗೆ ಇರಲನುವು ಕೊಡುವ ಎಲ್ಲ ಆಸ್ಪದಗಳನ್ನು ಸಾಧಿಸುತ್ತಿದ್ದ–ನೃತ್ಯ ಮಾಡುವುದು, ಅಶ್ವಾರೋಹಣದಲ್ಲಿ ಜೊತೆಗಿರುವುದು, ಉಪಾಹಾರ ಗೃಹಗಳಲ್ಲಿ ಭೆಟ್ಟಿಯಾಗುವುದು ಸಾಗಿಬಿಟ್ಟಿತ್ತು. ಆತನು ಹರೆಯದವನು, ನಡೆನುಡಿಯಲ್ಲಿ ಸಭ್ಯನು. ಆತನ ನಗುವಿನಲ್ಲಿ, ಹುಬ್ಬುಗಳ ಹಾವ ಭಾವಗಳಲ್ಲಿ ನನ್ನ ಪತಿಯ ಹೋಲಿಕೆ-ಅವರಿಗಿಂತ ಚೆಲುವ. ಈ ಹೋಲಿಕೆಯ ಮೂಲಕ ಆತನು ನನ್ನ ಕಣ್ಣಲ್ಲಿ ನೆಟ್ಟ—ಆದರೆ ಆತನ ತುಟಿಗಳಲ್ಲಿ, ಕಣ್ಣುಗಳಲ್ಲಿ, ಇಳಿಗದ್ದದಲ್ಲಿ ಸಾಮಾನ್ಯವಾಗಿ ಏನೊ ಒಂದು ಒರಟುತನ, ಹೀನ ಮನೋವೃತ್ತಿ ಕಾಣುತ್ತಿತ್ತು—ನನ್ನ ಪತಿಯ ಲಕ್ಷಣದಲ್ಲೊ, ಸವಿತನ, ಕನಿಕರ, ದೊಡ್ಡಸ್ತಿಕೆ ಕಂಡುಬರುತ್ತಿತ್ತು. ಆತನು ನನ್ನ ಪ್ರೇಮದಲ್ಲಿ ಒಳಿತಾಗಿ ಸಿಕ್ಕಿಬಿಟ್ಟಿದ್ದನೆಂದು ನಾನು

ತಿಳಿದಿದ್ದೆ—ಒಳ್ಳೆಯ ಅಭಿಮಾನದ ಆಗತ್ಯದಿಂದ ನೋಡುತ್ತಿದ್ದೆ ಆತನನ್ನು. ಒಮ್ಮೊಮ್ಮೆ ಆತನ ಅವಿಚಾರತನವನ್ನು ತಡೆದು ನಿಲ್ಲಿಸಿ ಸ್ನೇಹ ಸುಲಭ ಸಲಿಗೆಯ ಮಟ್ಟಿಗೆ ಆತನನ್ನು ತಂದಿರಿಸಿದಾಗ ಆತನು ರೇಗಿ ತನ್ನ ಮನದಲ್ಲಿ ಉಲುಕಿ ಹೊರಹೊಮ್ಮುತ್ತಿರುವ ಕಾಮುಕತೆಯಿಂದ ತೊಂದರೆಗೊಳಿಸುತ್ತಿದ್ದನು ನಾನು ಮನಸಾ ಒಪ್ಪಿಕೊಳ್ಳದಿದ್ದರೂ ನಾನು ಆತನನ್ನು ಕಂಡು ಭಯಗೊಳ್ಳುತ್ತಿದ್ದೆ—ಇಚ್ಛೆಯಿಲ್ಲದಾಗಿಯೂ ಆತನ ಬಗೆಗೆ ವಿಚಾರ ಮಾಡುತ್ತಿದ್ದೆ. ನನ್ನ ಪತಿಗೆ ಆತನ ಪರಿಚಯವಿತ್ತು—ಅವರು ಆತನನ್ನು ತಮ್ಮನ್ನು ನನ್ನ ಪತಿಯೆಂದೆ ಕೇವಲ ಗುರುತಿಸುವ ಅನೇಕ ಪರಿಚಿತರಾಗಿ ಹೆಚ್ಚಾಗಿ ಅನಾದರದಿಂದ, ತುಚ್ಛತೆಯಿಂದ ನೋಡುತ್ತಿದ್ದರು.

ಮೋಸಮಿನ ಕೊನೆಗೆ ನಾನು ಜಡ್ಡು ಬಿದ್ದೆ—ಎರಡು ವಾರ ಮನೆಯಲ್ಲಿಯೆ ಉಳಿದುಕೊಂಡೆ. ಆಮೇಲೆ ನಾನು ಹೊರಬಿದ್ದ ಮೊದಲ ಸಂಜೆಗೆ ವಾದ್ಯ ಮಂಡಲವನ್ನು ಕೇಳಲು ಹೋದೆ. ಅಲ್ಲಿ ತಿಳಿದಿದುದೇನೆಂದರೆ, ಲೇಡಿ ಎಸ್—ಎಂಬ ಒಬ್ಬ ಇಂಗ್ರಜ ಸ್ತ್ರೀಯು—ಚೆಲುವಿಕೆಯಲ್ಲಿ ಹೆಸರಾದವಳು—(ನಾನು ಮನೆಯಲ್ಲಿ ಉಳಿದುಕೊಂಡ ಅವಧಿಯಲ್ಲಿ) ಬಂದಿದ್ದಳು. ನಾನು ಮತ್ತೆ ಬಂದು ನಾಲ್ಕು ಜನರಲ್ಲಿ ಕೂಡಿದುದನ್ನು ನೋಡಿ ಎಲ್ಲರೂ ಆನಂದಪಟ್ಟರು—ನನ್ನ ಸುತ್ತ ನೆರೆದರು. ಆದರೆ ಆಕೆಯ ಸುತ್ತ ನೆರೆದವರು ಹೆಚ್ಚು ಪ್ರತಿಷ್ಠಿತರು. ನನ್ನ ಸುತ್ತ ನೆರೆದವರಲ್ಲಿ ಆಕೆ, ಆಕೆಯ ಚೆಲುವಿಕೆಯ ಮಾತೆ ನಡೆದಿತ್ತು. ನಾನು ಆಕೆಯನ್ನು ನೋಡಿದೆ—ಆಕೆ ನಿಜವಾಗಿಯೂ ಚೆಲುವೆಯಿದ್ದಳು—ಆದರೆ ಆಕೆಯ ಮೋರೆಯಮೇಲೊಂದು ಆತ್ಮ ಸಂತುಷ್ಟಿ ಕಳೆಯು ಮೂಡಿತ್ತು—ಅದು ಎಲ್ಲವನ್ನು ಮಸಣಿಸುತ್ತಿತ್ತು—ಹಾಗೆ ನಾನು ಆಡಿ ತೋರಿಸಿದೆ. ಹಿಂದಕ್ಕೆ ನನ್ನ ಮನರಂಜನೆ ಮಾಡಬಲ್ಲದುದೆಲ್ಲವೂ ಅಂದು ನೀರಸವಾಯಿತು. ಲೇಡಿ ಎಸ್—ಳು ಮರುದಿನ ಒಂದು ಹಳೆಯ ಕೋಟೆಯನ್ನು ನೋಡಿ ಬರುವುದಕ್ಕಾಗಿ ಏರ್ಪಾಟು ಮಾಡಿದಳು. ನಾನು ಹೋಗುವುದಕ್ಕೆ ಒಲ್ಲೆನೆಂದೆ. ಉಳಿದವರೆಲ್ಲರೂ ಹೋದಂತಿತ್ತು. ಬೇಡನ್ನಿನ ಬಗೆಗೆ ನನ್ನ ಮತದಲ್ಲಿ ಬದಲು ಹೊಂದಿತು. ನನಗೆ ಅಳಬೇಕೆಂದೆನಿಸಿತು—ವೈದ್ಯನಲ್ಲಿ ಗುಣವಾಗುವ ದಾರಿ ನೋಡದೆ ರಸ್ತ್ಯಕ್ಕೆ ಓಡಬೇಕೆಂದೆನಿಸಿತು. ಮನಸಿನಲ್ಲಿ ಕುವಿಚಾರಗಳು ಬಂದುವು. ನಾನು ಮಾತ್ರ ಒಪ್ಪಿಕೊಳ್ಳುತ್ತಿರಲಿಲ್ಲ. ವೈಯಲ್ಲಿ

ವಾಸಿಯಿಲ್ಲವೆಂದು ನೆವ ಮಾಡಿ ಸಂತೋಷಕೂಟಗಳಿಗೆ ಹೋಗುವುದನ್ನು ಬಿಟ್ಟುಬಿಟ್ಟೆ. ಹೊರಗೆ ಹೋಗುವುದಾದರೆ ನಾನೊಬ್ಬಳೆ—ಅದೂ ಮುಂಜಾನೆ—ಜಲಪ್ರಾಶನಕ್ಕಾಗಿ. ಆಗ ನನ್ನ ಜೊತೆಗಾರ್ತಿಯೆಂದರೆ ಮಾದಾಮ್ ಎಮ್—(ಆಕೆಯೊಬ್ಬ ರಸ್ಯನ್ ಸ್ತ್ರೀ)—ಆಕೆಯ ಜೊತೆಗೆ ಗಾಡಿಯಲ್ಲಿ ಕುಳಿತು ಹತ್ತಿರದ ಎಲ್ಲ ನೋಡತಕ್ಕಂಥ ಸ್ಥಾನಗಳನ್ನು ನೋಡಿಬಂದಿದ್ದೆ. ನನ್ನ ಪತಿಯು ಊರಲ್ಲಿರಲಿಲ್ಲ—ಹಾಯ್‌ಡೆಲ್ ಬರ್ಗಿಗೆ ಹೋಗಿದ್ದರು—ನಾನು ನೆಟ್ಟಗಾದ ಮೇಲೆ ರಸ್ಯಕ್ಕೆ ಹೋಗುವವರಿದ್ದೆವು—ಆಗಾಗ ನನ್ನನ್ನು ಕಾಣುವುದಕ್ಕೆಂದು ಬೇಡನ್ನಿಗೆ ಬರುತ್ತಿದ್ದರು.

ಒಂದು ದಿನ ಮಧ್ಯಾಹ್ನಕ್ಕೆ ಲೇಡಿ ಎಸ್—ಳು ಎಲ್ಲ ಜನರನ್ನು ಬೇಟೆಗೆಂದು ಕರಕೊಂಡು ಹೋದಾಗ ನಾನೂ ಮಾದಾಮ್ ಎಮ್—ಳೂ ಕೋಟೆಗೆ ಹೋದೆವು. ನಮ್ಮ ಗಾಡಿ ಆ ಸುತ್ತುಸುತ್ತಾಡುವ ದಾರಿಯಲ್ಲಿ ಸಾವಕಾಶವಾಗಿ ನಡೆದಿತ್ತು—ಎರಡೂ ಬದಿಗೆ ದಟ್ಟ ಗಿಡಗಳು—ಅಲ್ಲಿಂದ ಬೇಡನ್ನಿನ ಸುತ್ತಲಿನ ಅಂದಚೆಂದ ಕಾಣುತ್ತಿತ್ತು ಸೂರ್ಯನ ಮುಳುಗುವ ಬೆಳಕಿನಲ್ಲಿ,—ನಮ್ಮ ಮಾತು ಎಂದಿನಿಗಿಂತ ಹೆಚ್ಚು ಗಾಂಭೀರ್ಯಕ್ಕೆ ಬಂದಿಳಿಯಿತು. ನನ್ನ ಈ ಗೆಳತಿಯ ಪರಿಚಯು ಎಷ್ಟೋ ದಿನಗಳಿಂದ ಇತ್ತು. ಈಗ ಆಕೆಯನ್ನು ನಾನು ಬೇರೊಂದು ದೃಷ್ಟಿ ಹಚ್ಚಿ ನೋಡಿದೆ—ಆಕೆ ಒಳ್ಳೆಯ ತತ್ತ್ವನಿಷ್ಠಳೂ ತಿಳಿವಳಿಕೆಯಿದ್ದವಳೆಂದು ತೋರಿತು—ಆಕೆಯೆದುರಿಗೆ ಮುಚ್ಚುಮರೆಯಿಲ್ಲದೆ ಮಾತನಾಡಬಹುದಾಗಿತ್ತು—ಆಕೆಯೊಂದಿಗೆ ಸ್ನೇಹವಿಡುವುದು ವಿಹಿತವಾದುದಿತ್ತು. ನಾವು ನಮ್ಮ ಮಕ್ಕಳು, ನಮ್ಮ ಸುಖ ದುಃಖಗಳೂ, ಬೇಡನ್ನಿನಲ್ಲಿಯ ಜೀವನದ ನೀರಸತೆ, ಮೊದಲಾದ ವಿಷಯಗಳನ್ನು ಕುರಿತು ಮಾತನಾಡುವಾಗ ರಸ್ಯಕ್ಕೆ—ಅಲ್ಲಿಯ ಹಳ್ಳಿವಾಡಿನಲ್ಲಿ ಹೋಗಿರಬೇಕೆಂಬುದಾಗಿ ಹವಣಿಸಿತು ನಮ್ಮ ಜೀವ. ನಾವು ಕೋಟೆಯಲ್ಲಿ ಪ್ರವೇಶಿಸಿದಾಗ ಇದೆ ಧೀರ ಗಂಭೀರ ಭಾವನೆಯಿಂದ ನಮ್ಮ ಮನಸು ತುಂಬಿ ಹೋಗಿತ್ತು. ಆ ಗೋಡೆಗಳ ಅಂತರಂಗದಲ್ಲಿ ನೆಳಲೂ ತನಿವೂ ಇತ್ತು. ಸೂರ್ಯ ಪ್ರಕಾಶವು ಆ ಜೀರ್ಣ ಅವಶೇಷಗಳ ಮೇಲೆ ಬಿದ್ದಿತ್ತು. ಕಾಲಸಪ್ಪಳ ದನಿ ಕೇಳಬರುತಲಿದ್ದುವು. ಆದರಲ್ಲಿ ಅಲ್ಲಿಯ ನಿಸರ್ಗದ ನೋಟ— ಅದರಲ್ಲಿ ಎಷ್ಟು ಸೌಂದರ್ಯವಿದ್ದರೂ ರಸ್ಯನರಿಗೆ ಭಾವಶೂನ್ಯವೆ—ಆ ಬಾಗಿಲ ಚೌಕಟ್ಟಿನಲ್ಲಿ

ಹಾಕಿಟ್ಟ ಚಿತ್ರದಂತೆ ಕಾಣುತ್ತಿತ್ತು. ನಾವು ಕುಳಿತುಕೊಂಡು ವಿಶ್ರಮಿಸಿ ಕೊಂಡೆವು—ಸೂರ್ಯನು ಮುಳುಗುವುದನ್ನು ನೋಡಿದೆವು. ಆ ದನಿಗಳು ದೊಡ್ಡವಾಗುತ್ತ ನಡೆದವು—ನನ್ನ ಹೆಸರೂ ಹೊರಟಿದುದನ್ನು ಕೇಳಿದೆ. ನಾನು ಲಕ್ಷ್ಯಕೊಟ್ಟು ಕೇಳಿದೆ—ಪ್ರತಿ ಶಬ್ದವೂ ನನ್ನ ಕಿವಿಗೆ ಬೀಳದಿರಲಿಲ್ಲ. ಆ ದನಿಗಳನ್ನು ನಾನು ಗುರುತಿಸಿದೆ. ಮಾತನಾಡುವವರು ಇಟಾಲಿಯನ್ ಮಾರ್ಕ್ವಿಸ್‌ನೂ ಆತನ ಒಬ್ಬ ಫ್ರೆಂಚ್ ಗೆಳೆಯನೂ—ಆ ಇನ್ನೊಬ್ಬನ ಪರಿಚಯವೂ ನನಗಿತ್ತು. ಅವರು ನನ್ನ ಮತ್ತು ಲೇಡಿ ಎಸ್—ಳ ಬಗೆಗೆ ಮಾತನಾಡುತ್ತಿದ್ದರು—ಸೌಂದರ್ಯದಲ್ಲಿಯ ಸ್ಪರ್ಧಿಗಳೆಂದು ಆ ಫ್ರೆಂಚ್ ಗೃಹಸ್ಥನು ನಮ್ಮ ತುಲನೆ ನಡೆಸಿದ್ದನು. ಆತನು ಅಪಮಾನವಾಗುವಂತೆ ಏನೂ ಮಾತನಾಡದಿದ್ದರೂ ನನ್ನ ನಾಡಿ ಒತ್ತರದಿಂದ ಹಾರಲಾರಂಭಿಸಿತು ನಮ್ಮಿಬ್ಬರಲ್ಲಿಯ ಗುಣಗಳನ್ನು ಆತನು ವಿಸ್ತಾರದಿಂದ ಹೇಳಿದನು. ನನಗೆ ತಾಯ್ತನ ಬಂದಿತ್ತು—ಆಕೆ ಹತ್ತೊಂಬತ್ತು ವಯಸಿನಾಕೆ—ನನ್ನ ಕೂದಲುಗಳಲ್ಲಿ ನನ್ನ ಸೌಂದರ್ಯವಿದ್ದರೆ ಆಕೆಯ ಮೈಕಟ್ಟು ಚೆನ್ನಾಗಿದೆ. "ಮೇಲಾಗಿ." ಆತನೆಂದನು. "ಲೇಡಿ ಎಸ್—ಳು ನಿಜವಾಗಿಯೂ ದೊಡ್ಡ ಮನೆತನದವಳು, ಆ ಇನ್ನೊಬ್ಬಳೊ ಇತ್ತೀಚೆ ಹಿಂಡು ಹಿಂಡಾಗಿ ಅಡ್ಡಾಡುತ್ತಿರುವ ಮೂಲೆ ಕೊಂಪೆಯಲ್ಲಿಯ ರಸ್ಯನ ರಾಜಕುಮಾರಿಯರಲ್ಲಿಯೊಬ್ಬಳು." ನಾನು ಲೇಡಿ ಎಸ್—ಳೊಂದಿಗೆ ಸ್ಪರ್ಧೆ ಮಾಡದಿರುವುದೆ ವಿಹಿತ—ಬೇಡನ್ನಿನ ಮಟ್ಟಿಗಂತೂ ನನ್ನ ರಾಜ್ಯಕ್ಕೆ ಅಳಿಗಾಲ ಬಂದಿತ್ತಂತೆ.

"ಆಕೆಗಾಗಿ ವಿಷಾದಿಸುತ್ತೇನೆ—ಏನೂ ಆಕೆ ನಿನ್ನೊಂದಿಗೆ ಸ್ನೇಹ ಬೆಳಿಸಿದರೇ ಲೇಸು." ಎಂದೆನ್ನುತ್ತ ಆತನು ಗಹ ಗಹ ನಕ್ಕನು.

"ಆಕೆ ಹೊರಟು ಹೋದರೆ ನಾನೂ ಬೆನ್ನಹತ್ತಿ ಹೋಗುವೆನು—" ಇಟಾಲಿಯನ್ ದನಿಯೆಳೆಯುತ್ತ ಶಬ್ದಗಳು ಹೊರಬಿದ್ದವು

"ಪುಣ್ಯವಂತನಪ್ಪಾ!—ಇನ್ನೂ ಪ್ರಣಯದಲ್ಲಿ ಜೀವ, ಫ್ರೆಂಚ್ ಗೃಹಸ್ಥನು ನಕ್ಕನು.

"ಪ್ರಣಯ!" ಆ ಮತ್ತೊಂದು ದನಿ ನುಡಿದು ಕೆಲ ಕಾಲ ಸ್ತಬ್ಧವಿತ್ತು. "ನನಗದವಶ್ಯ—ಅದಿಲ್ಲದೆ ನಾನು ಜೀವಿಸಲಾರೆ. ಆಯುಷ್ಯವನ್ನು

ಪ್ರಣಯವನ್ನಾಗಿ ಮಾಡಿದರೇ ಜೀವಿಸಬೇಕು. ನಾನು ಯಾವ ಪ್ರಣಯ ಸಾಹಸವನ್ನೂ ಅರ್ಧಕ್ಕೆ ಬಿಟ್ಟು ಎದ್ದೆನೆಂದು ಆಗಿಲ್ಲ—ಈಗಿನ ಈ ಪ್ರಕರಣ ವನ್ನೂ ಕೊನೆಗಾಣಿಸುವೆನು. ”

“ದೈವ ನಿನಗೆ ಕೈ ಕೊಡಲಿ, ದೋಸ್ತ” ಫ್ರೆಂಚ್ ಗೃಹಸ್ಥನೆಂದನು.

ಅವರು ಒಂದು ಮೂಲೆಗೆ ತಿರುಗಿದರು—ದನಿಗಳು ಕೇಳದಂತಾದುವು. ಆಮೇಲೆ ಅವರು ಮೆಟ್ಟಲುಗಳನ್ನಿಳಿಯುತ್ತ ಬಂದುದು ಕೇಳಬಂದಿತು-ಒಂದು ಬದಿಯ ಬಾಗಿಲಿಂದ ನಮ್ಮ ಎದುರಿಗೆ ಬಂದರು. ನಮ್ಮನ್ನು ಕಂಡು ದಿಗಿ ಲುಗೊಂಡರು. ಮಾರ್ಕ್ವಿಸ್‌ನು ನನ್ನ ಹತ್ತಿರ ಬಂದಕೂಡಲೆ ನನ್ನ ಮೋರೆ ಕೆಂಪೇರಿತು—ಆತನು ತನ್ನ ಕೈ ಮುಂದೆ ಚಾಚಿದಾಗ ನನಗೆ ಭಯವೆನಿಸಿತು. ನಾನದನ್ನು ದೂಡಲರಿಯದಾದೆ—ನಾವು ಗಾಡಿಯ ಕಡೆಗೆ ಹೊರಟೆವು— ನಮ್ಮ ಮುಂದೆ ಮಾದಾಮ್ ಎಮ್-ಮತ್ತು ಆ ಫ್ರೆಂಚ್ ಗೃಹಸ್ಥ, ನಾವು ಹಿಂದಿನಿಂದ. ಆ ಫ್ರೆಂಚ್ ಗೃಹಸ್ಥನು ನನ್ನ ಬಗೆಗೆ ಆಡಿದುದೆಲ್ಲಕ್ಕೆ ನನ್ನ ಮನಸು ನೊಂದುಕೊಂಡಿತು—ನನಗೆ ಎನಿಸುವುದನ್ನು ಆತನು ಬಿರಿನುಡಿ ಯಿಂದ ಹೇಳಿದ್ದನು. ಆದರೆ ಆ ಇಟಾಲಿಯನ್ ಗೃಹಸ್ಥನು ಒಳ್ಳೆಯ ಬಿರುಸು ನುಡಿಯಿಂದ ಮಾತನಾಡಿದುದನ್ನು ಕಂಡು ನನಗೆ ಆಶ್ಚರ್ಯವೆನಿಸಿತು ನಾನು ಆತನಾಡಿದುದನ್ನು ಕಿವಿಗೊಟ್ಟು ಕೇಳಿದ್ದರೂ ಆತನು ಎಳ್ಳಷ್ಟೂ ಖತಿ ಗೊಳ್ಳಬಾರದೆಂಬುದು ನನ್ನನ್ನು ಕೆಣಕುತ್ತಿತ್ತು. ಮುಂದೆ ನಡೆದ ಆ ಇಬ್ಬರ ಹಿಂದಿನಿಂದ ನಾನು ಒತ್ತರದಿಂದ ನಡೆದಿದ್ದೆ—ಆತನೆಡೆಗೆ ನೋಡುತ್ತಿರಲಿಲ್ಲ— ಆತನಿಗೆ ಉತ್ತರ ಕೊಡುತ್ತಿರಲಿಲ್ಲ—ಆತನ ಕೈ ಹಿಡಿದಿದುದಷ್ಟೆ—ಆತನ ಮಾತು ಕೇಳುತ್ತಿರಲಿಲ್ಲ ನನಗೆ. ಆತನು ಎದುರಿಗೆ ಕಾಣುತ್ತಿರುವ ನೋಟ, ನಾವು ಬೆಟ್ಟಿಯಾದುದರ ಆನಂದ ಮುಂತಾದ ಅನೇಕ ವಿಷಯಗಳ ಬಗೆಗೆ ಮಾತನಾಡಿದ. ಆದರ ಕಡೆಗೆ ನನ್ನ ಲಕ್ಷ್ಯವಿರಲಿಲ್ಲ. ನನ್ನ ವಿಚಾರಗಳು ನನ್ನ ಪತಿಯಲ್ಲಿ ನೆಲೆಸಿದ್ದುವು—ನನ್ನ ಕಂದ, ನನ್ನ ದೇಶ—ನನಗೆ ನಾಚಿಕೆ ಸಾವಾಗಿತ್ತು—ಕಾತರಳಾಗಿದ್ದೆ—‘ಹೊಟೆಲ್‌ದ ಬೇಡ’ ಎಂಬ ನಮ್ಮ ನಿವಾ ಸದಲ್ಲಿಯ ನನ್ನ ಕೋಣೆಗೆ ಹೋಗಬೇಕೆಂದು ಹವಣಿಸುತ್ತಿದ್ದೆ—ಅಲ್ಲಿ ಕುಳಿತು ಶಾಂತವಾಗಿ ನನ್ನ ಮನಸಿನಲ್ಲಿ ಹುಟ್ಟಿದ ಭಾವನೆಯ ಬಿರುಗಾಳಿಯನ್ನು ಕುರಿತು ವಿಚಾರ ಮಾಡಬೇಕೆಂದಿದ್ದೆ. ಮಾದಾಮ್ ಎಮ್-ಳು ಸಾವಕಾಶ

ನಡೆದಿದ್ದಳು—ಇನ್ನೂ ಗಾಡಿಯ ವರೆಗೆ ಹೋಗುವುದು ದೂರವಿತ್ತು—ನನ್ನ ಜೊತೆಗಾರ ನನ್ನನ್ನು ಹಿಂದುಳಿಸಬೇಕೆಂದು ಸಾವಕಾಶವಾಗಿ ನಡೆದಿದ್ದ. "ಇದೆಲ್ಲ ಸಾಕು ಇನ್ನು" ಎಂದೆನ್ನುತ್ತ ಹೆಜ್ಜೆಗಳನ್ನು ಹೆಚ್ಚಿಸಿದೆ. ನನ್ನನ್ನು ಆತನು ಹಿಂದುಳಿಸಬೇಕೆಂದಿದ್ದ—ನನ್ನ ಕೈ ಹಿಡಿದು ಹತ್ತಿಕ್ಕುತ್ತಿದ್ದನೆಂಬುದು ಸ್ಪಷ್ಟವಿತ್ತು. ಮಾದಾಮ್ ಎಮ್‌-ಳು ಒಂದು ಮೂಲೆಗೆ ತಿರುಗಿದಳು—ನಾವಿಬ್ಬರೆ ಉಳಿದೆವು. ನಾನು ಭಯಭೀತಳಾದೆ.

"ಕ್ಷಮಿಸಿರಿ" ಎಂದು ಮರುಕದಿಂದ ನುಡಿದು ನನ್ನ ಕೈ ಬಿಡಿಸಿಕೊಳ್ಳಲೆಸಗಿದೆ. ನನ್ನ ಅಂಗಿಯ ತೋಳಿಗೆ ಹಚ್ಚಿದ ಲೇಸಿನ ತುದಿ ಆತನ ಕೋಟಿನ ಗುಂಡಿಯಲ್ಲಿ ತೊಡಕಿತು. ನನ್ನೆಡೆಗೆ ಒರಗಿ ಆತನು ಅದನ್ನು ಬಿಡಿಸಲೆಸಗಿದನು—ಆತನ ಬೆರಳುಗಳು ನನ್ನ ಮುಂಗೈಗೆ ಸ್ಪರ್ಶ ಮಾಡಿದುವು. ಇದು ವರೆಗೆ ನನಗೆ ಅಪರಿಚಿತ ಭಾವವೊಂದು—ಭಯ, ಸುಖಗಳ ಸಂಮಿಶ್ರಣ—ನನ್ನ ಮೈ ನಡುಗಿಸಿತು— ನಾನು ಆತನ ಕಡೆಗೆ ನೋಡಿದೆ—ಆ ನನ್ನ ವಿರಕ್ತ ಭಾವದಿಂದ ನನಗೆ ಆತನ ಬಗೆಗೆ ಎನಿಸುತ್ತಿರುವ ತಿರಸ್ಕಾರವನ್ನು ತಿಳಿಸಬೇಕೆಂದೆ. ನನ್ನ ಆ ನೋಟದಲ್ಲಿ ಮಾತ್ರ ಭಯ, ಕಾತರಗಳಷ್ಟೆ ವ್ಯಕ್ತವಾದುವು. ಆತನ ಆ ತಿಳಿಯಾದ ತೀಕ್ಷ್ಣವಾದ ಕಣ್ಣುಗಳು ನನ್ನ ಮೊಗದಲ್ಲಿ ನೆಟ್ಟು ವಿಚಿತ್ರವಾಗಿ ನನ್ನೆಡೆಗೆ, ನನ್ನ ಕುತ್ತಿಗೆಯ ಕಡೆಗೆ, ನನ್ನ ಉರೋಭಾಗದ ಕಡೆಗೆ ನೋಡಿದುವು. ಆತನ ಎರಡೂ ಕೈಗಳೂ ನನ್ನ ಮುಂಗೈಯನ್ನು ಅವಚಿಕೊಂಡಿದ್ದುವು. ಆತನ ತುಟಿಗಳು "ನಾನು ನಿನ್ನನ್ನು ಪ್ರೀತಿಸುತ್ತೇನೆ—ನೀನೆ ನನ್ನ ಜಗತ್ತು" ಎಂದುಸಿರುತ್ತಿದ್ದುವು—ಆ ತುಟಿಗಳು ನನ್ನ ಹತ್ತಿರ ಹತ್ತಿರ ಬರತೊಡಗಿದ್ದುವು. ಆ ಕೈಗಳು ನನ್ನ ಕೈಗಳನ್ನು ಬಿಗಿಯಾಗಿ ಅರೆಯುತ್ತಿದ್ದುವು—ನನ್ನಲ್ಲಿ ದಾಹವನ್ನುಂಟುಮಾಡುತ್ತಿದ್ದುವು. ನನ್ನ ಧಮನಿಗಳಲ್ಲಿ ದಾಹ,—ನನ್ನ ಕಣ್ಣು ಮಸುಕಾದುವು— ನಾನು ನಡುಗುತ್ತಿದ್ದೆ—ಆತನನ್ನು ದೂಡಬೇಕೆಂದಿರುವ ನುಡಿ ಒಳಗೇ ಅಡುಗಿತು ಅನಪೇಕ್ಷಿತವಾಗಿ ನನ್ನ ಗಲ್ಲಗಳ ಮೇಲೆ ಮುತ್ತು ಉದರಿತೆಂದು ನನಗೆನಿಸಿತು. ಥರಥರ ನಡುಗುತ್ತ ಮಂಜುಗಟ್ಟುತ್ತ ನಾನು ನಿಂತಲ್ಲಿಯೆ ನಿಂತೆ—ಆತನನ್ನು ಎವೆಯಿಕ್ಕದೆ ನೋಡಿದೆ. ಮಾತನಾಡಲರಿಯದೆ, ಕದಲಲರಿಯದೆ ನಾನು ನಿಂತೆ—ಹೌಹಾರಿದವಳಾಗಿ, ಅಪೇಕ್ಷೆಯುಳ್ಳವಳಾಗಿ ಕಾಮುಕಳಾಗಿ. ಅದೆಲ್ಲವೂ ಒಂದು

ಕ್ಷಣದಲ್ಲಿ ಮಾಯವಾಯಿತು—ಎಂಥ ಭಯಾನಕವಾದುದಾಕ್ಷಣ! ಆ ಸ್ವಲ್ಪ ಕಾಲದಲ್ಲಿ ಆತನನ್ನು ಆತನಿದ್ದ ಕಿದ್ದಂತೆಯೆ ಕಂಡೆ—ಟೊಪ್ಪಿಗೆಯ ಕೆಳಗೆ ನೇರ ವಾದ ಇಳಿ ಹಣೆ, (ಆ ಹಣೆ ನನ್ನ ಪತಿಯ ಹಣೆಯಂತಿತ್ತು) ನೀಟಾದ ಸುಂದರವಾದ ಮೂಗು—ಹಿಗ್ಗಿಸಿದ ಸೊರಳಿಗಳು—ಎಣ್ಣೆ ಹಚ್ಚಿ ಹುರಿ ಮಾಡಿದ ಮೀಸೆ ಗಡ್ಡಗಳು—ನುಣುಪು ನುಣುಪಾದ ಗಲ್ಲಗಳೂ ಕತ್ತೂ—ಬಣ್ಣ ಸವೆ ದುದು. ಆತನ ಬಗೆಗೆ ನನ್ನಲ್ಲಿ ದ್ವೇಷ, ಭಯಗಳು ಹುಟ್ಟಿದುವು. ಮನಸು ಹೇಸಿ ಆತನು ನನಗೆ ಅಸಮಾನನಾದನು. ಈ ಹೇಸಿ ಅಸಹ್ಯ ಮನುಷ್ಯನು ನನ್ನಲ್ಲಿ ಹುಟ್ಟಿಸಿದ ಉದ್ರೇಕ ವಿಕಾರಗಳಿಗೆ ನನ್ನ ಹೃದಯದಲ್ಲಿ ಪಡಿದನಿ ದೊರೆ ಯಿತು. ಆ ಹೀನ ಮನೋವೃತ್ತಿಯ ಮುಖಕ್ಕೆ ಮುಖ ಕೊಡಬೇಕೆಂಬ ಹಂಬಲ ಹುಟ್ಟಿತು—ಆ ತಿಳಿ ಬಣ್ಣದ ಮೃದು ಲಲಿತ ಕರಪಂಜರದ ಆ ವೇಗ ಕೊಳಗಾಗಬೇಕೆಂದೆನಿಸಿತು. ನನ್ನೆದುರಿಗೆ ನೀಡಿದ ಆ ನಿಷಿದ್ಧ ಸುಖಗಳ ಕಂದರದಲ್ಲಿ ಹಾರಿಕೊಳ್ಳಬೇಕೆಂದೆನಿಸಿತು.

"ನಾನು ದುಃಖದಲ್ಲಿ ಮುಳುಗಿಯೆ ಇರುವೆನು," ನಾನು ಯೋಚಿಸು ತ್ತಿದ್ದೆ; "ಇನ್ನು ದುಃಖದ ಬಿರುಗಾಳಿಗಳು ನನ್ನ ತಲೆ ಕುಕ್ಕಲಿ."

ಆತನು ತನ್ನ ಒಂದು ಕೈ ನನ್ನ ಸುತ್ತ ಸವರಿ ನನ್ನ ಮುಖದೆಡೆಗೆ ಒರ ಗಿದನು "ಹೀಗೆ!" ನಾನು ಯೋಚಿಸಿದೆ; "ಪಾಪ ಅಧೋಗತಿಗಳು ನನ್ನನ್ನು ಕೆಳಕ್ಕೆ ಕೆಳಕ್ಕೆ ಸೆಳೆದೊಯ್ಯಲಿ!"

"ನಿನ್ನನ್ನು ಪ್ರೀತಿಸುತ್ತೇನೆ!" ಆತನು ನನ್ನ ಪತಿಯ ದನಿಗೆ ಹೋಲುವ ದನಿಯಿಂದ ನನ್ನ ಕಿವಿಯಲ್ಲಿ ಉಸುರಿದನು. ತತ್ಕ್ಷಣ ನನ್ನ ಪತಿ, ನನ್ನ ಮಗು—ನನ್ನ ಜೀವನದಲ್ಲಿನ ಎರಡು ಅಮೂಲ್ಯ—ಈಗ ಅಲ್ಲಿಂದ ಹೊರಟು ಹೋದ—ವಸ್ತುಗಳ ವಿಚಾರ ಬಂದಿತು. ಅದೆ ಕ್ಷಣ ಮಾದಾಮ್ ಎಮ್—ಳ ದನಿ ಕೇಳಬಂದಿತು. ಒಂದು ಪಕ್ಕದಿಂದ ಆಕೆ ನನ್ನನ್ನು ಕರೆದಳು. ನಾನು ಎಚ್ಚರಗೊಂಡೆ—ಆತನೆಡೆಗೆ ನೋಡದೆ ನನ್ನ ಕೈ ಕೊಸರಿಕೊಂಡೆ—ಆಕೆಯೆ ಡೆಗೆ ಓಟ ಹೊಡೆದೆ—ನಾವಿಬ್ಬರೂ ಗಾಡಿಯಲ್ಲಿ ಕುಳಿತ ನಂತರ ಆತನೆಡೆಗೆ ನೋಡಿದೆ. ಆತನು ಟೊಪ್ಪಿಗೆ ಎತ್ತಿ ಅಭಿವಂದಿಸಿ ನಗುತ್ತ ಏನೊ ಒಂದು ಸಾಮಾನ್ಯ ವಿಷಯ ಕೇಳಿದನು. ಆಕ್ಷಣಕ್ಕೆ ಆತನ ಬಗೆಗೆನಿಸಿದ ಅಸಹ್ಯ ವಾದ ಹೇಸಿಕೆ ಆತನಿಗೆ ತಿಳಿಯುವಂತಿರಲಿಲ್ಲ.

ನನ್ನ ಜೀವನವು ಅದೆಂಥ ಅರ್ಥಹೀನವೆಂದೆನಿಸಿತು!—ಭವಿಷ್ಯ ಕಾಲದಲ್ಲಿ ಆಶೆಯಿಲ್ಲ—ಭೂತಕಾಲವೊ. ಬಣ್ಣ ಬಳಿದ ಕರಿ ಕೆಚ್ಚು! ಮಾದಾಮ್ ಎಮ್-ಳು ಮಾತನಾಡಿದಳು—ನನಗೆ ಅರ್ಥವಾಗುತ್ತಿರಲಿಲ್ಲ. ಆಕೆಯ ಮನಸಿನಲ್ಲಿ ನಾನು ಹುಟ್ಟಿಸಿದ ತಿರಸ್ಕಾರವನ್ನು ಮರೆಮಾಡುವುದಕ್ಕಾಗಿ ಕನಿಕರದಿಂದ ಮಾತನಾಡುತ್ತಿರಬಹುದೆಂದು ನನಗೆನಿಸಿತು. ಆಕೆಯ ಪ್ರತಿಯೊಂದು ಶಬ್ದದಲ್ಲಿ, ನೋಟದಲ್ಲಿ ಈ ತಿರಸ್ಕಾರ, ಈ ಕನಿಕರದ ಅವಹೇಲನೆ ಒಡಮೂಡಿದಂತಿತ್ತು. ಅಧೋಗತಿಗೆಳೆಯುವ ಆ ಮುತ್ತು ನನ್ನ ಗಲ್ಲದಮೇಲಿನ್ನೂ ಉರಿಯುತ್ತಿತ್ತು—ನನ್ನ ಪತಿಯ, ನನ್ನ ಮಗುವಿನ ವಿಚಾರ ಅಸಹನೀಯವಾಯಿತು. ನನ್ನ ಕೋಣೆಯಲ್ಲಿ ಒಬ್ಬಳೆ ಕುಳಿತಾಗ ನನ್ನ ಸ್ಥಿತಿಗತಿಯ ಬಗೆಗೆ ವಿಚಾರ ಮಾಡಿದೆ—ಒಬ್ಬಳೆ ಕುಳಿತುಕೊಳ್ಳುವುದೂ ಭಯವಾಯಿತು ನನಗೆ. ನನಗಾಗಿ ತಂದಿಟ್ಟ ಚಹಾ ಕುಡಿಯದೆ—ನನ್ನ ವಿಚಾರಗಳನ್ನರಿಯದೆ—ತ್ವರೆಯಿಂದ ನನ್ನ ಪತಿಯೆಡೆಗೆ ಹ್ಯಾಡೆಲ್‌ಬರ್ಗಿಗೆ—ಸಂಜೆಯ ಗಾಡಿಯಿಂದ ಹೊರಟು ನಿಂತೆ.

ಗಾಡಿಯಲ್ಲಿ ಒಂದು ಬರಿದಾದ ಕ್ಯಾರೀಜಿನಲ್ಲಿ ನನಗೆ ಮತ್ತು ತೊತ್ತಿಗೆ ಸ್ಥಳ ಹುಡುಕಿದೆ. ಗಾಡಿ ಹೊರಟ ಮೇಲೆ ಕಿಟಕಿಯಿಂದ ನನ್ನ ಮುಖದ ಮೇಲೆ ಗಾಳಿ ಬೀಸಿತು—ನಾನು ಶಾಂತಳಾದೆ—ನನ್ನ ಹಿಂದ ಮುಂದಿನ ಚರಿತ್ರವನ್ನೆಲ್ಲ ಚಿತ್ರಿಸಿಕೊಂಡೆ. ಪೀಟರ್ಸ್‌ಬರ್ಗಿಗೆ ಬರುವವರೆಗಿನ ನನ್ನ ವಿವಾಹಿತ ಜೀವನವು ಈಗೊಂದು ಹೊಸ ಬೆಳಕಿನಲ್ಲಿ ಬೆಳಗಿತು—ನನ್ನ ವಿವೇಕ ಬುದ್ಧಿಗೆ ತಿರಸ್ಕರಣೀಯವಾಗಿ ಕಂಡಿತು ಸಿಕೊಲ್‌ಸ್ಕಿಯಲ್ಲಿ ನಾವು ಮೊದಲ ಮಾಡಿದ ಜೀವನವನ್ನೂ ನಮ್ಮ ಯೋಜನೆಗಳನ್ನೂ ಇದೆ ಮೊದಲು ನೆನಪಿಗೆ ತಂದುಕೊಂಡೆ. ನನ್ನ ಪತಿಗೆ ಅಂದಿನಿಂದ ಯಾವ ಬಗೆಯ ಸುಖ ಸಿಕ್ಕಿತೆಂದು ನನ್ನನ್ನೆ ಕೇಳಿಕೊಂಡೆ. ನಾನವರನ್ನು ಕುರಿತು ಕೆಟ್ಟ ರೀತಿಯಿಂದ ನಡೆದುಕೊಂಡೆನೆಂದು ತೋರಿತು. ನಾನೆಂದುಕೊಂಡೆ; "ಅವರೇಕೆ ನನ್ನನ್ನು ತಡಹಿಡಿಯಲಿಲ್ಲ? ಅಲ್ಲದ ನೆವ ಮಾಡಿದರೇಕೆ? ಸ್ಪಷ್ಟ ಹೇಳುವುದಕ್ಕೆ ಹಿಂಜರಿದರೇಕೆ? ನನ್ನನ್ನು ಬಿಗಿದು ಹಿಡಿಯಲಿಕ್ಕೆ ತಮ್ಮ ಪ್ರೀತಿಯ ಪ್ರಭಾವವನ್ನೇಕೆ ಉಪಯೋಗಿಸಲಿಲ್ಲ? ಅಥವಾ ಅವರು ನನ್ನನ್ನು ಪ್ರೀತಿಸುತ್ತಿರಲಿಲ್ಲವೊ?" ಅವರ ಪ್ರೀತಿಯಿರಲಿ ಬಿಡಲಿ, ನನ್ನ ಗಲ್ಲದ ಮೇಲೆ ಆ ಅಸಹ್ಯ

ಮನುಷ್ಯನ ಮುತ್ತು ಅಂಟಿಕೊಂಡಂತೆನಿಸಿತು. ಹ್ಯಾಡೆಲ್‌ಬರ್ಗ ಸಮೀಪಿಸಿದಂತೆ ನನ್ನ ಪತಿಯ ಚಿತ್ರವು ನಿಚ್ಚಳವಾಗುತ್ತ ನಡೆಯಿತು—ಭೆಟ್ಟಿಯ ಪ್ರಸಂಗಕ್ಕೆ ಹೆಚ್ಚೆಚ್ಚಾಗಿ ಬೆದರುತ್ತ ನಡೆದೆ. "ಎಲ್ಲವನ್ನು ಅವರಿಗೆ ಹೇಳಿಬಿಡುವೆನು," ನಾನು ಯೋಚಿಸಿದೆ; "ಪಶ್ಚಾತ್ತಾಪದ ಕಂಬನಿಗಳಿಂದ ಎಲ್ಲವನ್ನು ತೊಳೆದು ಬಿಡುವೆನು. ಅವರು ನನ್ನನ್ನು ಕ್ಷಮಿಸಬಹುದು." ನನಗೆ ತಿಳಿದಿರಲಿಲ್ಲ "ಎಲ್ಲವನ್ನೆಂದರೇ"ನೆಂಬುದು. ಅವರು ನನ್ನನ್ನು ಕ್ಷಮಿಸಬಹುದೆಂತಲೂ ನಾನು ನಂಬಲಿಲ್ಲ.

ನಾನು ನನ್ನ ಪತಿಯು ಕುಳಿತ ಕೋಣೆಯಲ್ಲಿ ಪ್ರವೇಶಿಸಿದ ತತ್‌ಕ್ಷಣ ಅವರ ಮೋರೆ ಗಂಭೀರವಾದರೂ ಅಲ್ಲಿ ಆಶ್ಚರ್ಯ ಮೂಡಿತ್ತು. ಒಮ್ಮೆಲೆ ನನಗೇನೂ ಹೇಳುವುದಿಲ್ಲ—ಏನೂ ಒಪ್ಪಿಕೊಳ್ಳುವುದಿಲ್ಲ—ಕ್ಷಮೆ ಬೇಡಿಕೊಂಬುವ ಪ್ರಸಂಗವೇನೂ ಇರಲಿಲ್ಲವೆಂದೆನಿಸಿತು. ನನ್ನ ಮರುಕ, ನನ್ನ ಮೋರೆ ಹತ್ತಿಕ್ಕಿಡಬೇಕಾಯಿತು ನನಗೆ.

"ಇದೇಕೆ ನಿನ್ನ ತಲೆಯಲ್ಲಿ ಹೊಕ್ಕಿತು?" ಅವರು ಕೇಳಿದರು; "ನಾನು ಜೇಡನ್ನಿಗೆ ನಾಳೆ ಬರಬೇಕೆಂದಿದ್ದೆ." ಆಮೇಲವರು ನನ್ನೆಡೆಗೆ ನೇರವಾಗಿ ನೋಡಿ ಬೆಚ್ಚಿದಂತಾದರು; "ನಿನಗೇನಾಗಿದೆ? ಏನಾಗಿದೆ?" ಅವರು ಕೇಳಿದರು.

"ಏನೂ ಇಲ್ಲ," ನಾನು ಒಳ್ಳೆಯ ಸೋಲಿನಿಂದ ಉತ್ತರಕೊಟ್ಟೆ. ನಾನು ಮರಳಿ ಹೋಗಲಾರೆ—ನಾವು ನಾಳೆಗೇ ಊರಿಗೆ ನಿಮ್ಮಿಷ್ಟವಿದ್ದರೆ—ರಸ್ಯಕ್ಕೇ ಹೋಗೋಣ."

ಅವರು ತುಸು ಹೊತ್ತು ಏನೂ ಮಾತನಾಡದೆ ಸುಮ್ಮನಿದ್ದರು—ನನ್ನೆಡೆಗೆ ನೇರವಾಗಿ ನೋಡಿದರು. ಆಮೇಲೆಂದರು, "ನಿನಗೇನಾಗಿದೆ ಹೇಳು."

ನನ್ನ ಮೋರೆಗೆ ಕೆಂಪೇರಿತು—ನಾನು ಕೆಳಗೆ ನೋಡಿದೆ ಅವರ ಕಣ್ಣುಗಳಲ್ಲಿ ಕೋಪ, ತೀವ್ರ ನಿಷೇಧ ಕಂಡುಬಂದುವು. ಅವರೇನು ಕಲ್ಪನೆ ಮಾಡಿಕೊಳ್ಳಬಹುದೊ ಎಂದು ಭೀತಿಗೊಂಡು ನಾನು ಏನೇನೊ ಪಂಟು ಹೇಳಿದೆ—ನಾನೆ ಆಶ್ಚರ್ಯಪಟ್ಟೆ ಅದಕ್ಕಾಗಿ.

“ ಆಗಿಲ್ಲವೇನೂ. ನನಗೇ ಬೇಜಾರ, ಉದಾಸೀನತೆಯೆನಿಸತೊಡಗಿತು ಇಷ್ಟೆ—ನಮ್ಮಿಬ್ಬರ ಜೀವನಕ್ರಮ—ನೀವು-ಇವೆ ನನ್ನ ಮನಸಿನಲ್ಲಿ ಬರತೊಡಗಿತು. ನಿಮ್ಮೊಡನೆ ನಾನೀಗ ನಡೆದುಕೊಳ್ಳುವ ರೀತಿ ಶುದ್ಧ ತಪ್ಪು, ನನ್ನನ್ನು ಪರದೇಶಕ್ಕೆ ಯಾಕೆ ತಂದಿರಿ—ನಿಮಗದಾಗದಿದ್ದರೆ? ನಿಕೊಲ್‌ಸ್ಕಿಗೆ ಹೋಗೋಣ ನಡೆಯಿರಿ—ಅಲ್ಲಿಯೆ ಇರೋಣ ಹೋಗಿ ಒಮ್ಮೆ ”

“ ಸಾಕು ಮಾಡಬಾರದೆ ಈ ಭಾವ ಪ್ರದರ್ಶನೆಯನ್ನು ” ಅವರು ತೀವ್ರ ಸ್ವರದಿಂದ ನುಡಿದರು; “ ನಿಕೊಲ್‌ಸ್ಕಿಗೆ ಹೋಗೋಣ ಎಂಬ ವಿಚಾರ ರಮ್ಯವಿದೆ—ನಮ್ಮ ರೊಕ್ಕ ತಳಕಂಡದ್ದೂ ನಿಜ; ಅಲ್ಲಿಯೆ ಕೊನೆಯವರೆಗೂ ಇರುವ ಮಾತು ಕಲ್ಪನಾಗಮ್ಯವೆ ಸರಿ. ನೀನು ಒಂದೆ ಸ್ಥಳಕ್ಕೆ ಅಂಟುಕೊಂಡಿರತಕ್ಕವಳಲ್ಲವೆಂಬುದು ನನಗೆ ಗೊತ್ತು. ಚಹಾ ತೆಗೆದುಕೊ, ಮನಸು ಶಾಂತವಾದೀತು. ” ಎಂದೆನ್ನುತ್ತ ಅವರು ಪರಿಚಾರಕನನ್ನು ಕರೆಯಲು ಗಂಟೆ ಬಾರಿಸಲೆದ್ದರು.

ಅವರು ನನ್ನ ವಿಷಯವಾಗಿ ತಿಳಿದುಕೊಳ್ಳಬಹುದಾದುದನ್ನೆಲ್ಲ ಕಲ್ಪಿಸಿಕೊಂಡೆ. ಸಂಶಯ ಸಂಶಯ ಮಾಡುತ್ತಿರುವ ಮರುಕಗೊಂಡ ನೋಟವನ್ನು ಅವರು ನನ್ನೆಡೆಗೆಸೆದಾಗ ಅವರು ನನ್ನ ಬಗೆಗೆ ಹಾರದ ವಿಚಾರಗಳನ್ನು ಅವರ ವಿರಬಹುದೆಂದು ನಿರ್ಧರಿಸಿದೆ. “ ಅವರಿಗೆ ನನ್ನ ಬೆಲೆ ತಿಳಿಯದು. ” ನನಗೆ ಮಗುವಿನ ಕಡೆಗೆ ಹೋಗಬೇಕಿದೆ ಎಂದು ಹೇಳಿ ಕೋಣೆ ಬಿಟ್ಟು ಹೊರಟೆ. ಒಬ್ಬಳೆ ಕುಳಿತು ಅತ್ತು ಅತ್ತು ಅತ್ತೆ ಅಳಬೇಕೆಂದೆನಿಸಿತು ನನಗೆ—

## ಪರಿಚ್ಛೇದ ೯

ನಮ್ಮ ನಿಕೊಲ್‌ಸ್ಕಿಯ ಮನೆಗೆ ಮತ್ತೆ ಜೀವ ಕಳೆ ತುಂಬಿತು—ಇದುವರೆಗೆ ಅಲ್ಲಿ ಯಾರೂ ಇದ್ದಿರಲಿಲ್ಲ, ಒಲೆಗೆ ಬೆಂಕಿ ಬಿದ್ದಿರಲಿಲ್ಲ; ಆ ಹಿಂದಿನ ಕಾಲವು ಮಾತ್ರ ಬಾ ಎಂದರೂ ಬರುವಂತಿರಲಿಲ್ಲ-ಟಾಟ್ಯಾನಾಸಿಮ್ಯೊನೊವ್ನಳು ತೀರಿಕೊಂಡಿದ್ದಳು—ಈಗ ನಾವು ಇಬ್ಬರೆ-ಈ ಸಾಂನಿಧ್ಯ ಸಾಹಚರ್ಯಗಳಿಗಾಗಿ ಜೀವ ಹವಣಿಸುತ್ತಿರಲಿಲ್ಲ—ಬೇಸರಗೊಳ್ಳುತ್ತಿತ್ತು. ನನಗಂತೂ

ಆ ಚಳಿಗಾಲ ಮೈಯಲ್ಲಿ ಆರೋಗ್ಯವಿರಲಿಲ್ಲ—ನಾನು ಮುಂದೆ ನನ್ನ ಎರಡನೆಯ ಮಗುವನ್ನು ಹೆತ್ತ ನಂತರ ನೆಟ್ಟಗಾದೆ. ಪೀಟರ್ಸ್‌ಬರ್ಗಿನಲ್ಲಿದ್ದಾಗಿನಂತೆಯೆ ನಾವು ಗಂಡ ಹೆಂಡತಿ—ಒಬ್ಬರನ್ನೊಬ್ಬರು ನೋಡುತ್ತಿದ್ದೆವು—ಸ್ನೇಹವಿತ್ತು, ಆಗತ್ಯವಿರಲಿಲ್ಲ. ಆದರೆ ಈಗ ಮನೆಯಲ್ಲಿಯ ಪ್ರತಿಯೊಂದು ಕೋಣೆ, ಗೋಡೆ, ಸೋಫಾ ಮೊದಲ್ಗೊಂಡು ಅವರ ಬಗೆಗೆ ಹಿಂದಕ್ಕೆ ನನ್ನಲ್ಲಿದ್ದ ಭಾವನೆಯು ನೆನಪು ಕೊಡುತ್ತಿತ್ತು—ಅದೆಲ್ಲವನ್ನು ನಾನು ಕಳೆದುಕೊಂಡೆನಲ್ಲಾ ಎಂದೆನಿಸುತ್ತಿತ್ತು. ಯಾವುದೊ ಒಂದು ಅಕ್ಷಮಿತ ಅಪರಾಧವು ನಮ್ಮಲ್ಲಿ ಅಂತರಾಯವನ್ನುಂಟುಮಾಡಿದಂತಿತ್ತು. ಅದಕ್ಕಾಗಿ ಅವರು ನನ್ನನ್ನು ಶಿಕ್ಷಿಸುತ್ತಿದ್ದು ತಮಗದರ ಅರಿವೇ ಇಲ್ಲದಂತೆ ವರ್ತಿಸುತ್ತಿದ್ದರೆಂದೆನಿಸಿತು. ಆದರೆ ಕ್ಷಮೆ ಬೇಡಿಕೊಳ್ಳುವ ಕಾರಣವಿರಲಿಲ್ಲ—ಶಿಕ್ಷೆಗಾಗಿ ಮರುಗುವುದಿರಲಿಲ್ಲ. ನನಗಾದ ಶಿಕ್ಷೆಯಿಷ್ಟೆ—ಅವರು ಹಿಂದಿನಂತೆ ತಮ್ಮ ಮನಸನ್ನು, ತಮ್ಮ ಹೃದಯವನ್ನು ನನಗೊಪ್ಪಿಸಲಿಲ್ಲ; ಇನ್ನಾರಿಗಾದರೂ ಇನ್ನಾವುದಕ್ಕಾದರೂ ಒಪ್ಪಿಸಿದ್ದರೆಂತಲ್ಲ, ಅವರಿಗೆ ಹೃದಯವೆ ಇದ್ದಿಲ್ಲವೆಂತಿತ್ತು. ಕೆಲವು ಸಲ ನನಗೆನಿಸುವುದೇನೆಂದರೆ ಅವರು ತೋರಿಕೆಗೆ ಹೀಗೆ ಮಾಡುತ್ತಿರಬೇಕು—ನನ್ನ ಮನಸನ್ನು ನೋಯಿಸುವುದಕ್ಕಾಗಿ—ಅವರ ಹೃದಯದಲ್ಲಿ ಆ ಹಿಂದಿನ ಪ್ರೀತಿ ಇದ್ದೆ ಇರುವುದು; ಅದನ್ನು ನಾನು ಚೇತರಿಸಬೇಕೆಂದೆ. ಆದರೆ ನನಗೆ ಯಶ ದೊರೆಯಲಿಲ್ಲ; ಅವರು ನನ್ನಲ್ಲಿ ಸರಳ ಭಾವವಿಲ್ಲವೆಂದೂಹಿಸಿ ತಾವು ನನ್ನೊಡನೆ ಸರಳತನದಿಂದ ನಡೆದುಕೊಳ್ಳುವುದನ್ನು ಬಿಟ್ಟರು—ಭಾವ ಪ್ರದರ್ಶನದ ಪ್ರಸಂಗಗಳಿಗಂಜಿದರು. ಅವರ ಮೋರೆಯ ಮೇಲೆ ಅವರ ದನಿಯಲ್ಲಿ "ಮಾತನಾಡಿ ಫಲವೇನು? ಎಲ್ಲವನ್ನು ನಾನರಿತಿದ್ದೇನೆ—ನಿನ್ನ ನಾಲಿಗೆಯ ತುದಿಯ ಮೇಲೆ ಏನಿದೆ ಎಂಬುದು ಗೊತ್ತಿದೆ ನೀನು ಹೇಳುವುದೊಂದು ಮಾಡುವುದು ಮತ್ತೊಂದು!" ಎಂಬುದು ನನಗೆ ಕಾಣುತ್ತಿತ್ತು. ಮೊದಮೊದಲು ನನಗೆ ಈ ಸರಳತೆಯ ಅಭಾವ ನೋಡಿ ಮನೋಭಂಗವೆನಿಸುತ್ತಿತು. ನಂತರ ಸರಳತೆಯ ಅವಶ್ಯಕತೆಯಾದರೂ ಏನು ಎಂದುಕೊಂಡೆ. ಈಗ ನನ್ನಿಂದ ನನ್ನ ಪ್ರೀತಿಯನ್ನು ವ್ಯಕ್ತ ಮಾಡುವುದಾಗಲಿ, ಅವರಿಂದ ನನ್ನೊಂದಿಗೆ ಸ್ತೋತ್ರಗಳನ್ನು ಹೇಳಿಸುವುದಾಗಲಿ, ನಾನು ಪಿಯಾನೊ ನುಡಿಸುವಾಗ ಕೇಳಿರೆಂದು ಹೇಳುವುದಾಯಿತು ಆಗದು. ನಮ್ಮಿಬ್ಬರ ಬಳಕೆಯ ಸಂಬಂಧ

ಏನೊ ಒಂದು ರೀತಿಭಾತಿಯ ಕ್ರಮದಿಂದ ನಿಯಮಿತವಾಗಿತ್ತು. ನಮ್ಮಿಬ್ಬರ ಜೀವನದ ರೀತಿಯೆ ಬೇರೆ ಬೇರೆಯಾಗಿತ್ತು. ಅವರಿಗೆ ಕೆಲವೊಂದು ವ್ಯಾಪಗಳಿದ್ದವು—ಅಲ್ಲಿ ನನ್ನ ಆವಶ್ಯಕತೆಯಿರಲಿಲ್ಲ ನನಗೂ ಅವುಗಳಲ್ಲಿ ಮನಸು ಹಾಕಬೇಕೆಂಬೆನಿಸುತ್ತಿರಲಿಲ್ಲ—ನಾನೊ, ಆಲಸ್ಯದಿಂದ ದಿನ ಹಾಕುತ್ತಿದ್ದೆ—ಅದನ್ನು ನೋಡಿ ಅವರಿಗೂ ವ್ಯತ್ಯಾಸ, ದುಃಖವೆನಿಸಲಿಲ್ಲ. ನಮ್ಮ ಮಕ್ಕಳೂ ನಮ್ಮಿಬ್ಬರಲ್ಲಿ ಒಂದು ಬಂದನವನ್ನು ನಿರ್ಮಾಣಮಾಡಬಹುದೆಂದರೆ ಅವಿನ್ನೂ ಚಿಕ್ಕವಿದ್ದವು.

ವಸಂತಕಾಲ ಬಂದಿತು—ಅದರೊಂದಿಗೆ ಕಾಟ್ಯಾ ಮತ್ತು ಸೋನ್ಯಾ ಬೇಸಿಗೆಯುನ್ನು ನಮ್ಮೊಂದಿಗೆ ಹಳ್ಳಿವಾಡಿನಲ್ಲಿ ಕಳೆಯುಬೇಕೆಂದು ಬಂದರು. ನಿಕೊಲ್‌ಸ್ಕಿಯ ಮನೆಯ ದುರಸ್ತಿಯ ಕೆಲಸ ನಡೆದುದರಿಂದ ನಾವು ನಮ್ಮ ಪ್ರೊಕ್ರೊವ್‌ಸ್ಕಿಯಲ್ಲಿಯ ಮನೆಗೆ ಇರಲಿಕ್ಕೆ ಹೋದೆವು—ಆ ವ್ಹರಾಂಡ, ದಿವಾಣಖಾನೆಯಲ್ಲಿದ್ದ ಮಡಿಸುವ ಮೇಜು, ಆ ಪಿಯಾನೊ, ಬಿಳಿಯ ತೆರೆಗಳಲ್ಲಿ ಮುಸುಕಿದ ನನ್ನ ಮಲಗುವ ಕೋಣೆ, ನನ್ನ ಬಾಲ್ಯದ ಕನಸುಗಳು—ಇವೆಲ್ಲವುಗಳನ್ನು ನಾನು ಹಿಂದೆ ಬಿಟ್ಟು ಹೋಗಿದ್ದೆ—ಅವೆಲ್ಲವುಗಳು ಇದ್ದಕ್ಕಿದ್ದಂತೆ ಇದ್ದವು. ಮಲಗುವ ಕೋಣೆಯಲ್ಲಿ ಎರಡು ಮಂಚಗಳಿದ್ದವು—ಒಂದು ನನ್ನದು—ಅಲ್ಲಿ ಈಗ ನನ್ನ ಪುಟ್ಟ ಕೂಸು ಕೊಕೊಷಾ ನಲಿದಾಡುತ್ತಿತ್ತು—ನಾನು ರಾತ್ರಿ ಕ್ರೂಸಿನಿಂದ ದೃಷ್ಟಿ ತೆಗೆಯಹೋದಾಗ. ಮತ್ತೊಂದದರಲ್ಲಿ ಘಾನ್ಯಾ ತನ್ನ ಸಡಿಲ ಸಡಿಲ ಅಂಗಿಯನ್ನು ಸರಿಸಿ ಇಣಿಕಿ ನೋಡುತ್ತಿದ್ದ. ಆ ಕೋಣೆಯ ಮಧ್ಯದಲ್ಲಿ ನಿಂತು ಅದರ ದೃಷ್ಟಿ ತೆಗೆಯಹೋದಾಗೊಮ್ಮೆ ಎಲ್ಲ ಮೂಲೆ ಗೋಡೆಗಳಿಂದ, ತೆರೆಗಳಿಂದ ನನ್ನ ತಾರುಣ್ಯದ ನೋಟವು ನಿರ್ಮಾಣವಾಗಿ ನನ್ನ ಕಣ್ಣೆದುರಿಗೆ ನಿಲ್ಲುತ್ತಿತ್ತು—ಬಾಲ್ಯ ಭಾವದ ಗೀತಿಗಳು ಕಿವಿಗೆ ಬೀಳತೊಡಗುತ್ತಿದ್ದವು. ಆ ದೃಶ್ಯಗಳೀಗೆಲ್ಲಿದ್ದವು? ಆ ಗಿತಿಗಳೆಲ್ಲಿ? ನಾನು ಬಯಸಲಾರದಂಥದೆಲ್ಲವೂ ಒದಗಿ ಬಂದಿತ್ತು. ನನ್ನ ಅಸ್ಪಷ್ಟ ಕನಸುಗಳೆಲ್ಲ ನೈಜವಾಗಿದ್ದವು—ಆ ನೈಜವು ಮಾತ್ರ ವ್ಯಗ್ರಗೊಳಿಸುವಂಥದು, ಅಸಹನೀಯವಾದುದು—ಆನಂದವಿಲ್ಲದುದು. ಎಲ್ಲವೂ ಇದ್ದಕ್ಕಿದ್ದಂತೆ ಇತ್ತು—ಕಿಟಕಿಯಿಂದ ಕಾಣುವ ತೋಟ ಹುಲ್ಲ ಗಾದು, ಕಾಲದಾರಿ, ಕೊಳದಡಿಯಲ್ಲಿನ ಬುಲ್ ಬುಲ್ ಪಕ್ಷಿಯ ಸಂಗೀತ, ಅದೆ ಅರಳಿದ ಲಿಲಕ್ಕುಗಳು, ಮನೆಯನ್ನು

ಬೆಳಗುವ ಅದೆ ಚಂದ್ರಮನು; ಆದರೂ ಅವೆಲ್ಲವುಗಳಲ್ಲಿ ಅದೆಂಥ ಬದಲು. ನನಗೆ ಹತ್ತಿದಂಥ ಹೊಂದಿದಂಥ ಎಲ್ಲ ವಸ್ತು ಮಾತ್ರಗಳಲ್ಲಿ ಅದೆಂಥ ಭಾವ ಹೀನತೆ! ಹಿಂದಿನಂತೆ ನಾನು ಮತ್ತು ಕಾಟ್ಯಾ ನಡುಮನೆಯಲ್ಲಿ ಕುಳಿತು ಮಾತನಾಡುತ್ತೇವೆ—ಅವರ ಬಗೆಗೆ ಮಾತನಾಡುತ್ತೇವೆ. ಕಾಟ್ಯಳ ಮೋರೆ ಹೀರಿದಂತಾಗಿ ಮುದುಡಿ ಹೋಗಿದೆ. ಆಕೆಯ ಕಣ್ಣುಗಳಲ್ಲಿ ಆನಂದ ಆಶೆ ಗಳ ಹೊಳಪಿಲ್ಲ—ಅಲ್ಲಿ ಈಗ ಕನಿಕರ ಮರುಕ, ದುಃಖಗಳೆ ಮೂಡಿವೆ. ಅವರ ಬಗೆಗೆ ಮಾತನಾಡುವಾಗ ಭಾವನೆಯ ಭರದಿಂದ ಮಾತನಾಡುತ್ತಿರಲಿಲ್ಲ, ನಿಧಾನವಾಗಿ ಅವರ ಪ್ರತಿಯೊಂದು ಕೃತಿಯನ್ನು ಒರೆಗಲ್ಲಿಗೆ ಹಚ್ಚಿ ನೋಡು ತ್ತಿದ್ದೆವು. ನಮ್ಮ ಪಾಲಿಗೆ ಈ ಸುಖ ಬಂದುದಕ್ಕೆ ನಾವು ಆಶ್ಚರ್ಯಪಡು ವುದಿಲ್ಲ—ನಮ್ಮ ವಿಚಾರಗಳನ್ನು ನಾವು ಜಗತ್ತಿಗೆ ಸಾರಿ ಡಂಗುರ ಹೊಡೆಯು ವುದಿಲ್ಲ. ಊಂ ಹೂಂ!—ನಾವು ಒಳ್ಳೆಯ ಷಡ್ಯಂತ್ರಿಗಳಂತೆ ಕುಚು ಕುಚು ಮಾತನಾಡಿ ಎಲ್ಲವೂ ಹೀಗೆ ಬದಲಾಗುವ ಕಾರಣವೇನೆಂದು ಒಬ್ಬರನ್ನೊ ಬ್ಬರು ವಿಚಾರಿಸುತ್ತೇವೆ. ಅವರು ಇದ್ದಕ್ಕಿದ್ದಂತೆ ಇದ್ದರು—ಹುಬ್ಬುಗಳ ನಡುವೆ ಒಂದೆರಡು ಗೆರೆಗಳು ಬಿದ್ದಿದ್ದರೆ ಬಿದ್ದಿರಬೇಕು-ಕೂದಲುಗಳೂ ಸ್ವಲ್ಪ ಬಿಳಿಯೊಡೆದಿರಬೇಕು ಅಷ್ಟೆ. ಆದರೆ ಮೈತುಂಬ ಕಣ್ಣಿಟ್ಟು ನೋಡುತ್ತಿರುವ ಅವರ ಮೋರೆಯ ಮೇಲಿನ ಗಾಂಭೀರ್ಯ ಉದ್ವಿಗ್ನತೆಯ ತೆರೆಯಾಚೆ ಮರೆ ಯಾಗಿತ್ತು. ನಾನಾದರೂ ಮೊದಲಿನವಳೆ—ಮಾತ್ರ ನನ್ನಲ್ಲಿ ಪ್ರೀತಿ, ಪ್ರೀತಿಯ ಆಕಾಂಕ್ಷೆಯಿರಲಿಲ್ಲ— ಕೆಲಸ ಮಾಡುವ ಚಟುವಟಿಕೆಯಿರಲಿಲ್ಲ—ಅಥವಾ ಸಮಾಧಾನವಿರಲಿಲ್ಲ. ನನ್ನ ಧರ್ಮನಿಷ್ಠತೆ, ನನ್ನ ಪತಿಪ್ರೇಮ, ನನ್ನ ಜೀವ ನದ ಸಂಪೂರ್ಣತೆ, ಈಗ ಯಾವ ಜಗತ್ತಿನ ಮಾತೊ, ಯಾವ ಕಾಲದ ಮಾತೊ ಎಂದಾಗಿವೆ. ಒಂದು ಕಾಲಕ್ಕೆ ಪರರಿಗಾಗಿ ಜೀವಿಸುವುದೆ ಸುಖ ವೆಂಬುದು ಸರಿಯಾದ ಮಾತು ಎಂದು ಮನವರಿಕೆಯಾಗಿತ್ತು. ಈಗ ಹಾಗೆಂ ದರೆ ಅರ್ಥವೆ ಆಗುತ್ತಿರಲಿಲ್ಲ. ತಮಗೇ ಜೀವನದಲ್ಲಿ ಸ್ವಾರಸ್ಯವಿಲ್ಲದಾಗ ಪರ ರಿಗಾಗಿ ಹೆಣಗುವುದೆಂತು?

ಪೀಟರ್ಸ್‌ಬರ್ಗಿಗೆ ಮೊದಲ ಸಲ ಹೋದಾಗಿನಿಂದ ನಾನು ಸಂಗೀತ ವೆಂಬುದನ್ನು ಬಿಟ್ಟು ಬಿಟ್ಟಿದ್ದೆ. ಈಗ ಆ ಹಳೆಯ ಪಿಯಾನೊ, ಆ ಹಳೆಯ ಗೀತಿಗಳು ನನ್ನನ್ನು ತಮ್ಮೆಡೆಗೆ ಸೆಳೆಯತೊಡಗಿದುವು.

ಒಂದು ದಿನ ನನ್ನ ಮೈಯಲ್ಲಿ ಆರೋಗ್ಯವಿರಲಿಲ್ಲ—ನಾನೊಬ್ಬಳೆ ಮನೆಯಲ್ಲಿದ್ದೆ. ನನ್ನ ಪತಿಯು ಕಾಟ್ಯಾ ಸೋನ್ಯರೊಂದಿಗೆ ನಮ್ಮ ನಿಕೊಲ್‌ಸ್ಕಿಯಲ್ಲಿದ್ದ ಮನೆ ನೋಡಲಿಕ್ಕೆ ಹೋಗಿದ್ದರು. ಚಹಾ ಆಗಿ ಕುಳಿತಿತ್ತು. ನಾನು ಕೆಳಗೆ ಹೋಗಿ ಅವರು ಬರುವವರೆಗೆ ಪಿಯಾನೊ ನುಡಿಸುತ್ತ ಕುಳಿತೆ. ನಾನು ಜ್ಯೋತಿಸ್ನಾ ಗೀತಿಯನ್ನು ಪ್ರಾರಂಭಿಸಿದೆ. ಕಣ್ಣಿಗೆ ಯಾರೂ ಕಾಣುತ್ತಿರಲಿಲ್ಲ—ಯಾರ ಸದ್ದೂ ಇರಲಿಲ್ಲ—ತೋಟದ ಮೋರೆಗಿದ್ದ ಕಿಟಕಿ ತೆರೆದಿತ್ತು—ಚಿರಪರಿಚಿತವಾದ ಸದ್ದು ಕೋಣೆಯಲ್ಲಿ ಸುಳಿದಾಡತೊಡಗಿತು. ಆರಂಭದ ಸ್ವರಮೇಲನದೊಂದಿಗೆ ಅವರು ನಿತ್ಯದಲ್ಲಿ ಕೇಳುತ್ತ ಕುಳಿತುಕೊಳ್ಳುವ ಸ್ಥಳದೆಡೆಗೆ ನೋಡಿದೆ. ಅಲ್ಲಿ ಅವರಿರಲಿಲ್ಲ—ಅವರ ಕುರ್ಚಿ—ಅಲ್ಲಿಂದ ಕದಲಿರಲಿಲ್ಲ—ಕಿಟಕಿಯಿಂದ ಮುಳುಗುವ ಸೂರ್ಯನ ಕಿರಣಗಳಿಂದ ಬೆಳೆದ ಲೀಲಕ್‌ದ ಝುಡುಪು ಕಾಣುತ್ತಿತ್ತು—ಸಂಜೆಯ ಮಲಮಲವು ನುಸುಳಿತು ಎಲ್ಲ ಕಡೆಯೂ ನಾನು ಪಿಯಾನೋದ ಮೇಲೆ ಎರಡೂ ಮೊಳಕೈಯೂರಿ ಮೋರೆ ಮುಚ್ಚಿಕೊಂಡು ವಿಚಾರ ಮಾಡುತ್ತ ಎಷ್ಟೊ ಹೊತ್ತು ಕುಳಿತೆ ಇನ್ನು ಮರಳಿ ಬಾರದ ಹಿಂದಿನ ಕಾಲವನ್ನು ನೆನೆದು ದುಃಖಪಟ್ಟೆ—ಮುಂದಿನ ಕಾಲವನ್ನು ನಿರೀಕ್ಷಿಸಿ ಕಾತರಗೊಂಡೆ. ನನಗೆ ಮುಂದೆ ಜೀವನವಿಲ್ಲವೆಂದೆನಿಸಿತು—ಯಾವ ಇಚ್ಛೆಯಿಲ್ಲ. ಯಾವ ಆಶೆಯಿಲ್ಲ. "ನನ್ನ ಆಯುಷ್ಯ ಮುಗಿದಂತಾಯಿತೆ?" ನಾನು ಭಯಗೊಂಡು ಯೋಚಿಸಿದೆ. ಆಮೇಲೆ ಮೇಲಕ್ಕೆ ನೋಡಿ ಯೋಚನೆಯೆಂಬುದನ್ನು ಮರೆತು ಬಿಡಬೇಕೆಂದು ಅವೆ ಅವೆ ಸ್ವರಗಳನ್ನು ನುಡಿಸತೊಡಗಿದೆ. ನಾನು ದೇವರಿಗೆ ಬೇಡಿಕೊಂಡೆ; "ದೇವರೆ, ನಾನು ಪಾಪ ಮಾಡಿದ್ದರೆ ಕ್ಷಮಿಸು—ನನ್ನ ಹೃದಯದಲ್ಲಿ ಒಮ್ಮೆ ಅರಳಿ ಹೋದುದನ್ನು ಮತ್ತೆ ಅರಳುವಂತೆ ಮಾಡು—ನನ್ನ ಕರ್ತವ್ಯವಾವುದೂ ನನ್ನ ಗತಿಯೇನೂ ಎಂಬುದಕ್ಕೆ ಮಾರ್ಗ ತೋರಿಸು." ಹೊರಗೆ ಹುಲ್ಲಗಾದಿನಲ್ಲಿ, ನಮ್ಮ ಮನೆಯ ಮೆಟ್ಟಲ ಹತ್ತಿರ ಗಾಲಿಗಳ ಸಪ್ಪಳವಾಯಿತು. ಆಮೇಲೆ ನನಗೆ ಪರಿಚಿತವಿದ್ದ ಕಾಲ ಹೆಜ್ಜೆಗಳು ವ್ಹರಾಂಡದ ವರೆಗೆ ಬಂದು ನಿಂತುವು. ಆದರೆ ನನ್ನ ಹೃದಯವು ಮುಂದುವರಿದು ಉತ್ತರ ಕೊಡಲಿಲ್ಲ. ನಾನು ಸಂಗೀತವನ್ನು ನಿಲ್ಲಿಸಿದಾಗ ನನ್ನ ಹಿಂದೆಯೆ ಹೆಜ್ಜೆಗಳು ಕೇಳಬಂದುವು—ನನ್ನ ಹೆಗಲಮೇಲೆ ಒಂದು ಕೈ ಬಿದ್ದಿತು.

"ನೀನು ಇದನ್ನೆ ನುಡಿಸುತ್ತಿರುವುದರಲ್ಲಿ ಅದೆಂಥ ಔಚಿತ್ಯವಿದೆ—" ಅವರೆಂದರು.

ನಾನು ಮಾತನಾಡಲಿಲ್ಲ.

"ಚಹಾ ಆಯಿತೆ ನಿನ್ನದು?" ಅವರು ಕೇಳಿದರು.

ನಾನು ಅವರೆಡೆಗೆ ನೋಡದೆ ನಕಾರಾರ್ಥವಾಗಿ ತಲೆ ಅಲ್ಲಾಡಿಸಿದೆ—ನನ್ನ ಮೋರೆಯ ಮೇಲಿನ ಭಾವವು ಅವರ ಕಣ್ಣಿಗೆ ಬೀಳಬಾರದಾಗಿ ನನ್ನಿಷ್ಟವಿತ್ತು.

"ಅವರು ಇದೀಗ ಬರಬಹುದು," ಅವರೆಂದರು; "ಕುದುರೆ ಬಳಗ ಹೂಡಿತು—ನಡು ದಾರಿಯಲ್ಲಿಳಿದು ನಡೆದು ಬರಬೇಕಾಯಿತು ಅವರಿಗೆ."

"ಅವರ ದಾರಿ ಕಾಯೋಣ," ಎಂದು ನುಡಿದು ನಾನು ವ್ಹರಾಂಡಕ್ಕೆ ಹೊರಟೆ—ಅವರೂ ಹಿಂದಿನಿಂದ ಅಲ್ಲಿಗೆ ಬರಬಹುದೆಂದಾಶಿಸಿ. ಅವರು ನಮ್ಮ ಚಿಕ್ಕ ಮಕ್ಕಳ ವಿಷಯ ಕೇಳಿ ಮೇಲುಪ್ಪರಿಗೆಗೆ ನಡೆದರು ಮತ್ತೆ ಅವರ ಸಾಂನಿಧ್ಯ, ಅವರ ಸ್ನೇಹ ಪೂರ್ಣವಾದ ದನಿ ನಾನು ಕಳೆದುಕೊಂಡಿದುದಾದರೂ ಏನು ಎಂಬ ಸಂಶಯವನ್ನುಂಟುಮಾಡಿತು. ನನಗೆ ಬೇಕಾದುದಾದರೂ ಏನು? "ಇವರು ಕನಿಕರವುಳ್ಳವರು, ಕರುಣೆಯುಳ್ಳವರು—ಒಳ್ಳೆಯ ಪತಿ—ಒಳ್ಳೆಯ ತಂದೆ—ಇದಕ್ಕೂ ಹೆಚ್ಚಿನದೇನು ಬೇಕಾದುದೆಂಬುದು ನಾನರಿಯೆ." ನಾನು ವ್ಹರಾಂಡದ ಹುಸಿಯಲ್ಲಿದ್ದ ಬೆಂಚಿನ ಮೇಲೆ ಕುಳಿತುಕೊಂಡೆ—ವಾಗ್ದಾನದ ದಿನ ಇಲ್ಲಿಯೆ ಹೀಗೇ ಕುಳಿತಿದ್ದೆ. ಸೂರ್ಯನು ಮುಳುಗಿದ್ದನು—ಕತ್ತಲಾಗುತ್ತ ನಡೆದಿತ್ತು—ವಸಂತ ಕಾಲದ ಒಂದು ಮೋಡ ಮನೆಯ ಮೇಲೆ, ತೋಟದಲ್ಲಿ ನೇತಾಡುತ್ತಿತ್ತು. ಗಿಡಗಳಾಚೆ ನೆಲದಂಚು ಸವೆಯುವ ಸಂಜೆಯ ಬಣ್ಣದೊಂದಿಗೆ ಕಾಣುತ್ತಿತ್ತಷ್ಟೆ-ಒಂದೆ ಒಂದು ಚುಕ್ಕೆ ಇಣಿಕಿ ನೋಡುತ್ತಿತ್ತು. ಎದುರಿನ ನಿಸರ್ಗದ ನೋಟ ಮೋಡಗಳಲ್ಲಿ ಮುಸುಕಿ ಮಳೆಯ ಹನಿಯುದುರುವ ದಾರಿ ನೋಡುತ್ತಿತ್ತು. ಗಾಳಿಯ ಉಸಿರೆಂಬುದಿರಲಿಲ್ಲ—ಒಂದು ಎಲೆ ಮೆದೆ ಕೂಡ ಅಲ್ಲಾಡುತ್ತಿರಲಿಲ್ಲ—ಲಿಲಕ್ ಮತ್ತು ಬರ್ಚ ಹೂಗಳ ಸುವಾಸನೆ ವ್ಹರಾಂಡದಲ್ಲಿ, ತೋಟದಲ್ಲಿ ಇಡುಗಿ ಹೋಗಿತ್ತು-ಇಡಿ ವಾತಾವರಣಕ್ಕೇ ಹೂ ಬಿಟ್ಟಿತ್ತೊ ಏನೊ ಎಂಬಂತೆ. ಈಗೊಂದುಸಿರು

ಆಗೊಂದುಸಿರು ಎಂದೆನ್ನುತ್ತ ಸುವಾಸನೆ ಹೆಚ್ಚೆಚ್ಚಾಗ ತೊಡಗಿತು—ಕಣ್ಣು ಕಿವಿಗಳನ್ನೆಲ್ಲ ಮುಚ್ಚಿಕೊಂಡು ಕೇವಲ ಸುವಾಸನೆಯನ್ನೆ ಸವಿಯುತ್ತ ಕುಳಿತು ಕೊಳಬೇಕೆಂದೆನಿಸುತ್ತಿತ್ತು. ಡಾಲಿಯಾ ಮತ್ತು ಗುಲಾಬಿನ ಗಿಡಗಳು ಒಡ್ಡಿನ ಕರಿಯಂಚಿಗೆ ಸದ್ದಿಲ್ಲದೆ ನಿಂತಿದ್ದುವು—ತರೆದು ಬಿಳಿಯಾದ ತುದಿಯಲ್ಲಿ ಅಷ್ಟೆ ಚಿಗಿಯುತ್ತಿದ್ದುವೊ ಏನೊ ಎಂಬಂತೆ— ಕೊಳ್ಳದಾಚೆ ಕಪ್ಪೆಗಳು ಮಳೆ ಬಂದು ಅವುಗಳನ್ನು ಕೊಳಕ್ಕೆ ಅಟ್ಟುವವರೆಗೆ ಸಿಕ್ಕ ಅವಧಿಯಲ್ಲಿ ಮೋಜು ನಡೆಸಿದ್ದುವು—ಆರ್ಭಟಿಸಿ ರಟಗುಡುತ್ತ. ಸಂತತವಾಗಿ ಬೀಳುತ್ತಿರುವ ನೀರಿನ ಸಪ್ಪಳವೊಂದೆ ಅವುಗಳು ರಟಗುಡುವುದನ್ನು ಮರೆಮಾಚಿಸಿ ಕೇಳಬರುತ್ತಿತ್ತು—ಆಗಾಗ ಬುಲ್‌ಬುಲ್ ಪಕ್ಷಿಗಳು ಒಂದನ್ನೊಂದು ಕೂಗುತ್ತಿದ್ದುವು ಒಂದು ಝುಡುಪಿನಿಂದ ಮತ್ತೊಂದು ಝುಡುಪಿಗೆ ಹಾರಿ. ಈ ಸಲ ವಸಂತ ಕಾಲ ಕ್ಕಾದರೂ ಒಂದು ಬುಲ್‌ಬುಲ್ ಪಕ್ಷಿಯು ಕಿಟಿಕಿಯ ಕೆಳಗೆ ತನ್ನ ಗೂಡು ಕಟ್ಟಿತ್ತು— ಅದೀಗ ಗಿಡಗಳ ಗುಂಪಿಗೆ ಹಾರಿ ಹೋದುದು ಕೇಳಬಂದಿತು— ನಾನೂ ವ್ಹರಾಂಡಕ್ಕೆ ನಡೆದೆ. ನಾನು ಕುಳಿತಲ್ಲಿಂದ ಬುಲ್‌ಬುಲ್ ಪಕ್ಷಿಯು ಒಮ್ಮೆ ಶಿಳ್ಳು ಹೊಡೆದು ಸುಮ್ಮನಾಯಿತು. ಮಳೆ ಬರುವುದೆಂದು ಅದೂ ಅಪೇಕ್ಷಿಸುತ್ತಿತ್ತು.

ನನ್ನ ಭಾವನೆಗಳನ್ನು ಹತ್ತಿಡಬೇಕೆಂದು ಯತ್ನಿಸಿದೆ— ನಾನು ಏನನ್ನೊ ನಿರೀಕ್ಷಿಸುತ್ತಿದ್ದೆ ದುಃಖಿಸುತ್ತಿದ್ದೆ.

ಅವರು ಕೆಳಗೆ ಬಂದು ನನ್ನ ಹತ್ತಿರ ಕುಳಿತರು.

" ಅವರು ತೊಯ್ಸಿಕೊಂಡು ಬರಬಹುದೊ ಏನೊ, " ಅವರೆಂದರು.

" ಅಹುದು, " ನಾನು ಉತ್ತರಕೊಟ್ಟೆ—ಎಷ್ಟೊ ಹೊತ್ತು ನಾವು ಮಾತ ನಾಡದೆ ಕುಳಿತಿದ್ದೆವು.

ಮೋಡ ಕೆಳಕ್ಕೆ ಕೆಳಕ್ಕೆ ಇಳಿಯಿತು— ಗಾಳಿಯಿರಲಿಲ್ಲ. ಸುತ್ತಲೂ ತನಿವೂ ಸುವಾಸನೆ ಹುಟ್ಟಿತು. ಕೂಡಲೆ ಹುಸಿಯಲ್ಲಿ ಒಂದು ಹನಿ ಬಿದ್ದು ಪುಟಿದಂತೆ ಮಾಡಿತು. ಆಮೇಲೆ ಬಡಾಕ್ ಎಲೆಗಳ ಮೇಲೆ ಹನಿಗಳುದುರಿ ದುವು. ನಂತರ ದೊಡ್ಡ ದೊಡ್ಡ ಹನಿಗಳ ಧಾರೆಯೆ ಇಟ್ಟಿತು. ಬುಲ್‌ಬುಲ್ ಪಕ್ಷಿಗಳೂ ಕಪ್ಪೆಗಳೂ ಸದ್ದಿಲ್ಲದೆ ಕುಳಿತಿದ್ದುವು ಕಾಲುವೆಯಾಗಿ ಕೆಳಕ್ಕುರು

ಳುವ ನೀರಿನ ಸಪ್ಪಳ ಮಳೆಯ ಸಪ್ಪಳದಲ್ಲಿ ದೂರ ದೂರವಾಗಿ ಕೇಳಿದರೂ ಸಂತತವಾಗಿ ಕೇಳಬರುತ್ತಲೆ ಇತ್ತು. ಹುಸಿಯಲ್ಲಿ ಆಸರ ಮಾಡಿಕೊಂಡ ಒಂದು ಹಕ್ಕಿಯು ಎರಡೆ ಎರಡು ಸ್ವರಗಳನ್ನು ಬೇಸರವಿಲ್ಲದೆ ನುಡಿಯುತ್ತಿತ್ತು. ನನ್ನ ಪತಿಯು ಒಳಗೆ ಹೊರಟರು.

"ನೀವೆಲ್ಲಿ ಹೊರಟಿರಿ?" ಅವರನ್ನು ನಿಲ್ಲಿಸಬೇಕೆಂದು ನಾನು ಕೇಳಿದೆ; "ಇಲ್ಲಿ ಎಷ್ಟು ಸೊಗಸಾಗಿದೆ."

"ಅವರಿಗೆ ಕೊಡೆ, ಕಾಲಚೀಲ ಕಳಿಸಬೇಕು." ಅವರು ಉತ್ತರ ಕೊಟ್ಟರು.

"ತೊಂದರೆಗೊಳ್ಳಬೇಡಿರಿ—ಇದೀಗ ಹೊರಪಾಗುವುದು.

ನಾನು ಹೇಳಿದುದು ಸರಿಯೆಂದು ಅವರಿಗೆ ಮನವರಿಕೆಯಾಯಿತು—ನಾವು ವ್ಹರಾಂಡದಲ್ಲಿ ಉಳಿದೆವು ಆ ತೊಯ್ದ ಕಟಾಂಜನದ ಮೇಲೆ ಕೈಯೂರಿ ನಾನು ನನ್ನ ಕತ್ತು ಚಾಚಿದೆ. ಮಳೆಯ ನೀರು ನನ್ನ ಕೂದಲುಗಳನ್ನೂ ಕತ್ತನ್ನೂ ತೊಯ್ಸಿತು ಮೋಡವು ತಿಳುವಾಗಿ ಹಗುರಾಗಿ ನಮ್ಮ ತಲೆಯಮೇಲೆ ನೇತಾಡುತ್ತ ಸಾಗಿತು. ನೀರ ಹನಿಗಳು ಮುಗಿಲಿನಿಂದೊ ಗಿಡಗಳಿಂದೊ ಬಸಿಯಾಗಿ ಬೀಳತೊಡಗಿದುವು. ಕೊಳ್ಳದಲ್ಲಿ ಕಪ್ಪೆಗಳು ರಟಗುಡತೊಡಗಿದುವು. ಬುಲ್‌ಬುಲ್ ಪಕ್ಷಿಗಳು ತೊಯ್ದ ತಪ್ಪಡಿಯಾದ ಝುಡುಪುಗಳಿಂದ ಈ ಇಲ್ಲಿಂದ ಆಗ ಅಲ್ಲಿಂದ ಒಂದನ್ನೊಂದು ಕರೆಯತೊಡಗಿದ್ದುವು.

"ಎಷ್ಟು ಚೆನ್ನಾಗಿದೆ!" ಎಂದು ಕಟಾಂಜನದ ಮೇಲೆ ಕುಳಿತು ನನ್ನ ತಲೆಯಮೇಲೆ ಕೈಯಾಡಿಸುತ್ತ ಅವರು ನುಡಿದರು.

ಆ ಸ್ಪರ್ಶವು ನನಗೊಂದು ಹೀಯಳಿಕೆಯೆಂದಾಗಿ ತೋಚಿತು—ನಾನು ಅಳವೋರೆಗೆ ಬಂದೆ.

"ಇದಕ್ಕೂ ಹೆಚ್ಚಿನದೇನು ಬೇಕು?" ಅವರೆಂದರು; "ನಾನೀಗ ತೃಪ್ತನಾಗಿದ್ದೇನೆ—ನನಗೇನು ಬೇಡ. ನಾನು ಸಂಪೂರ್ಣ ಸುಖಿಯಾಗಿದ್ದೇನೆ"

ಇನ್ನೊಮ್ಮೆ ಬೇರೆ ಕತೆಯನ್ನೆ ಹೇಳಿದ್ದರೆಂದೆಂದುಕೊಂಡೆ. ಸುಖವೆಂಬುದೆಷ್ಟು ದೊರೆತರು ತಮಗೆ ಸಾಲದೆಂದು ಹೇಳಿದ್ದರು. ಅವರೀಗ ಶಾಂತರೂ

ತೃಪ್ತರೂ ಆಗಿದ್ದರು—ನನ್ನ ಪಾಲಿಗೊ, ಪಶ್ಚಾತ್ತಾಪವನ್ನು ಒಡನುಡಿಯಬೇಕಿತ್ತು, ಕಂಬನಿಗರಿಯಬೇಕಿತ್ತು.

"ಎಷ್ಟು ಚೆನ್ನಾಗಿದೆ ಎಂದು ನಾನು ಹೇಳಬಹುದು; ನಾನೆಂದೆ;" ಇದರ ಸೌಂದರ್ಯ ನೋಡಿ ನನಗೆ ವಿಷಾದವೆನಿಸುವುದೇನೊ ನಿಜ. ಹೊರಗೆ ಎತ್ತ ನೋಡಿದತ್ತ ಸೌಂದರ್ಯ, ಸೊಬಗು—ನನ್ನ ಹೃದಯದಲ್ಲಿಯೊ, ಎಲ್ಲವೂ ಮಸಣಿಸಿದು, ಮುಸಮುಸಕು, ಅತೃಪ್ತ ಆಶೆ ಆಕಾಂಕ್ಷೆಗಳ ಸಂತೆ— ನಿಮ್ಮ ಈ ಸೌಖ್ಯದಲ್ಲಿ ಹಿಂದಿನ ಜೀವನದ ಬಗೆಗೆ ಮರುಕ ಲವಲವಿಕೆಗಳಿರಲಿಕ್ಕಿಲ್ಲವೆ?"

ಅವರು ನನ್ನ ತಲೆಯಮೇಲಿನ ತಮ್ಮ ಕೈ ಸೆಳೆದುಕೊಂಡು ತುಸು ಹೊತ್ತು ಸುಮ್ಮನೆ ಕುಳಿತರು.

"ನನಗೂ ಹಾಗೆನಿಸುತ್ತಿತ್ತು—" ನೆನಪು ಮಾಡಿಕೊಂಡು ಹೇಳುವಂತೆ ನುಡಿದರು; "ವಿಶೇಷವಾಗಿ ವಸಂತ ಕಾಲದಲ್ಲಿ. ನಾನು ಇಡಿ ರಾತ್ರಿ ಎಚ್ಚತ್ತು ಕಳೆಯುತ್ತಿದ್ದೆ—ನನ್ನೊಂದಿಗೆ ನನ್ನ ಆಶೆ ಆಕಾಂಕ್ಷೆಗಳು—ಒಳ್ಳೆಯ ಜೋಡು ಕಾಲ ಕಳೆಯಲಿಕ್ಕೆ! ಇಡಿ ಆಯುಷ್ಯ ನನ್ನೆದುರಿಗಿತ್ತು. ಈಗ ಅದೆಲ್ಲ ಹಿಂದುಳಿಯಿತು—ಇದ್ದುದರಲ್ಲಿ ನನಗೆ ತೃಪ್ತಿ—ಜೀವನವೆಂಬುದೆ ದೊಡ್ಡದೆಂದು ಮನವರಿಕೆಯಾಯಿತು." ಅವರು ಒಳ್ಳೆಯ ಆತ್ಮವಿಶ್ವಾಸದ ವೈಮರೆವಿನಿಂದ ನುಡಿದರು—ಅದನ್ನು ಕೇಳಿ ನನಗೆ ದುಃಖವೆನಿಸಿದರೂ ಅದು ನಿಜವೆಂದು ನಂಬಿದೆ.

"ನೀವಿನ್ನು ಬಯಸುವಂಥದೇನೂ ಇರಲಾರದೆ?" ನಾನು ಕೇಳಿದೆ.

"ನಾನು ಅಶಕ್ಯಕ್ಕೆ ಬಾಯ ಹಾಕುವವನಲ್ಲ," ನನ್ನ ವಿಚಾರಗಳನ್ನೂಹಿಸಿ ಅವರೆಂದರು; "ನೀನು ಹೊರಗೆ ಹೋಗಿ ತಲೆ ತೊಯ್ಸಿಕೊಳ್ಳಬಹುದು—" ನನ್ನ ತಲೆಯಮೇಲೆ ಮಗುವಿಗೆ ಚುಕ್ಕು ಬಡಿದಂತೆ ಕೈಯಾಡಿಸಿದರು. "ಈ ಎಲೆ ಮೆದೆಗಳು ತೊಯ್ಸಿಕೊಂಡಿವೆ ತಮ್ಮನ್ನು—ಅವುಗಳಲ್ಲಿ ನಿನಗೆ ಈರ್ಷ್ಯೆ—ಎಲೆಯಾಗಬೇಕೆನ್ನುವಿ— ಮೆದೆಯಾಗಬೇಕೆನ್ನುವಿ— ಮಳೆ ನೀರಾಗಬೇಕೆನ್ನುವಿ. ನಾನೊ, ಹೊರಗೆ ನಿಂತು ಅವುಗಳನ್ನು—ಸುಂದರವಾ

ದುದನ್ನು, ಎಳೆಯಾದುದನ್ನು, ಸುಖಿಯಾದುದನ್ನು ನೋಡಿಯೆ ತೃಪ್ತಿಪಡ ಬೇಕೆಂದಿರುವೆ. ”

“ ಹಿಂದೆ ಆಗಿ ಹೋದುದಕ್ಕೆ ಮರುಕವಿಲ್ಲವೆ ನಿಮಗೆ? ” ನಾನು ಕೇಳಿದೆ—ನನ್ನ ಹೃದಯವು ಹೆಚ್ಚೆಚ್ಚಾಗಿ ಜಡವಾಗುತ್ತ ನಡೆಯಿತು.

“ ಇಲ್ಲ, ” ಅವರು ಅಷ್ಟೆ ನುಡಿದುಕೊಂಡರು.

“ ಹಾಗಿರದು! ಹಾಗಿರದು! ” ಅವರೆಡೆಗೆ ತಿರುಗಿ ಅವರ ಕಣ್ಣಲ್ಲಿ ಕಣ್ಣಿಟ್ಟು ನೋಡಿ ನಾನೆಂದೆ; “ ಹಿಂದಿನದಕ್ಕೆ ಮರುಕವಿಲ್ಲವೆ ನಿಮಗೆ? ”

“ ಇಲ್ಲ, ” ಅವರು ಮತ್ತೆ ನುಡಿದರು; “ ಕೇಳಿದರೆ ಉಪಕಾರವೆ ಆಗಿದೆ ಅದರಿಂದ—ನನಗೆ ಮರುಕವೆಂಬುದಿಲ್ಲ. ”

“ ಅದೆಲ್ಲ ಮರಳಿ ಬರಲೆಂನೆನಿಸಲಾರದೆ? ” ನಾನು ಕೇಳಿದೆ.

ಅವರು ಮೋರೆ ತಿರುವಿ ತೋಟದೆಡೆಗೆ ನೋಡಿದರು.

“ ಇಲ್ಲ—ನಾನು ರೆಕ್ಕೆಗಳನ್ನೂ ಕೇಳಬಹುದು. ಅದು ಅಶಕ್ಯ. ”

“ ಹಿಂದಿನದರಲ್ಲಿ ಬದಲು ಮಾಡಲರಿಯರಾ? ಯಾವುದಕ್ಕೂ ನಿಮನ್ನೂ ನನ್ನನ್ನೂ ದೋಷಿಯೆಂದೆನ್ನಲಾರಿರಾ? ”

“ ಎಂದೂ ಇಲ್ಲ—ಆದುದೆಲ್ಲ ಒಳ್ಳೆಯದೆ ಆಯಿತು. ”

“ ಇಲ್ಲಿ ಕೇಳುತ್ತೀರಾ! ” ಅವರ ಕೈ ತಟ್ಟಿ ಅವರ ಮೋರೆ ನನ್ನೆಡೆಗೆ ತಿರುಗುವಂತೆ ಮಾಡಿ ನಾನು ನುಡಿದೆ. “ ನಾನು ಹೇಗಿರಬೇಕೆಂದು ನಿಮ್ಮಿಷ್ಟ ವಿತ್ತೋ ಹಾಗೆ ನಾನಿರಬೇಕಾಗಿ ನೀವೇಕೆ ಸೂಚಿಸಲಿಲ್ಲ? ನನಗೆ ಸಲ್ಲದ ಸ್ವಾತಂತ್ರ್ಯವನ್ನು ನೀವೇಕೆ ಕೊಟ್ಟಿರಿ? ನನಗೆ ಯೋಗ್ಯ ಮಾರ್ಗ ತೋರಿಸು ವುದನ್ನೇಕೆ ಬಿಟ್ಟಿರಿ? ನೀವು ಇಷ್ಟಪಟ್ಟಿದ್ದರೆ, ನೀವು ನನ್ನನ್ನು ಯೋಗ್ಯ ಮಾರ್ಗದಿಂದ ಕರೆದೊಯ್ದಿದ್ದರೆ ಆದುದೆಲ್ಲ ಆಗುತ್ತಿರಲೆ ಇಲ್ಲ. ” ನನ್ನ ದನಿ ಯಲ್ಲಿ ಹಿಂದಿನ ಪ್ರೀತಿ ಸ್ನೇಹಗಳಳಿದು ನಿರ್ದಾಕ್ಷಿಣ್ಯವಾದ ಹೀಯಳಿಕೆಯೆ ಹೆಚ್ಚೆಚ್ಚಾಗಿ ತೋರತೊಡಗಿತು.

"ಆಗುತ್ತಿರಲಿಲ್ಲವೆಂದರೇನು!" ಅವರು ಆಶ್ಚರ್ಯದಿಂದ ಕೇಳಿದರು; "ಅದುದರಲ್ಲಿ ತಪ್ಪೇನೂ ಇಲ್ಲ. ಎಲ್ಲವೂ ಸರಿ—ಎಲ್ಲವು ಸರಿಯಾದುದೆ." ಅವರು ನಸುನಕ್ಕು ನುಡಿದರು.

"ಅವರಿಗೆ ನಿಜವಾಗಿಯೂ ತಿಳಿಯಲಾರದೆ?" ನಾನು ಯೋಚಿಸುತ್ತಿದ್ದೆ—"ಹೆಚ್ಚಿನದೆಂದರೆ, ತಿಳಿಯಬಯಸುವುದಿಲ್ಲವೆ?"

ಆಮೇಲೆ ನಾನು ಆವೇಗದಿಂದ ನುಡಿದೆ, "ನೀವು ಬೇರೆಯಾಗಿ ನಡೆದುಕೊಂಡಿದ್ದರೆ ಈ ಶಿಕ್ಷೆ—ನನ್ನ ತಪ್ಪಿಲ್ಲದೆ ನಾನು ಅನುಭವಿಸುತ್ತಿರುವ ಈ ಪ್ರಾಯಶ್ಚಿತ್ತ—ಈ ಹೀಯಳಿಕೆಯ ಆವಶ್ಯಕತೆಯಿರಲಿಲ್ಲ—ನನ್ನ ಸರ್ವಸ್ವವನ್ನು ನೀವು ಹೀಗೆ ಸೆಳೆದುಕೊಳ್ಳುತ್ತಿರಲಿಲ್ಲ!"

"ಇದೇನು ಮಾತನಾಡುತ್ತಿರುವಿ ನೀನು?" ಅವರು ಕೇಳಿದರು—ಅವರಿಗೆ ನನ್ನ ಮಾತಿನ ಅರ್ಥವಾಗದಂತಿತ್ತು.

"ಬೇಡಿರಿ—ನನ್ನನ್ನು ತಡವಬೇಡಿರಿ! ನೀವು ನನ್ನಿಂದ ನಿಮ್ಮ ವಿಶ್ವಾಸ, ನಿಮ್ಮ ಪ್ರೀತಿ, ನಿಮ್ಮ ಆದರ, ಎಲ್ಲವನ್ನು ಸೆಳೆದುಕೊಂಡಿರುವಿರಿ. ಹಿಂದಿನದನ್ನೆಲ್ಲ ನೆನೆದರೆ ನೀವು ಈಗ ನನ್ನನ್ನು ಪ್ರೀತಿಸುತ್ತಿರಬಹುದೆಂದು ನಾನು ನಂಬಲಾರೆ. ಬೇಡ. ನಡುವೆ ಮಾತನಾಡಬೇಡಿರಿ. ಇದುವರೆಗೆ ನನ್ನನ್ನು ಕಂದಿಸುತ್ತಿರುವ ವಿಚಾರಗಳನ್ನೆಲ್ಲ ಒಮ್ಮೆ ತೋಡಿಕೊಳ್ಳುತ್ತೇನೆ. ಜಗತ್ತೇನಿದೆ ಎಂಬುದು ನನಗೆ ಗೊತ್ತಿಲ್ಲದಿರುವುದು ನನ್ನ ತಪ್ಪೆ?—ನನ್ನ ಪಾಠ ನಾನೆ ಕಲಿಯಬೇಕೆಂದು ನೀವು ಬಿಟ್ಟಿದ್ದುದೂ ನನ್ನ ತಪ್ಪೆ? ಈಗ ನನಗೆ ತಿಳಿವಳಿಕೆ ಬಂದ ಮೇಲೆ ಒಂದು ವರುಷವಾಯಿತು ನಾನು ನಿಮ್ಮೆಡೆಗೆ ಬರಲು ಧಡಪಡಿಸುತ್ತೇನೆ, ನೀವು ಮಾತ್ರ ನನ್ನನ್ನು ದೂಡುವುದಕ್ಕೆ ಮೊದಲ ಮಾಡುವಿರಿ ಮತ್ತೆ ಅದರ ಅರಿವು ನಿಮಗೆ ಇಲ್ಲವೆ ಇಲ್ಲದಂತೆ ನಟಿಸುತ್ತಿರುವಿರಿ. ನೀವು ಮಾಡುವುದೆಲ್ಲವನ್ನು ಮಾಡುವಿರಿ ನಾನೇ ದೋಷಿತಳು ದೈವಗೇಡಿಯಾದುದರಿಂದ ನಿಮ್ಮನ್ನು ದೂಷಿಸುವುದು ಹೇಗೆ? ನಮ್ಮಿಬ್ಬರಿಗೂ ಸುಖವಿಲ್ಲದಂತೆ ಮಾಡುವ ಆ ಜೀವನ ಕ್ರಮಕ್ಕೆ ನನ್ನನ್ನಟ್ಟಬೇಕೆಂದು ನೀವು ಮಾಡಿರುವಿರಿ."

"ಹಾಗೇನು ಮಾಡಿರುವೆನು ನಾನು?" ಅವರು ಆಶ್ಚರ್ಯಭಯಗಳಿಂದ ಕೂಡಿದ ದನಿಯಿಂದ ಕೇಳಿದರು.

“ ಇನ್ನೂ ನಿನ್ನೆಯೆ ನೀವು ಹೇಳಿದಿರಿ—ಹಾಗೆ ಹಗಲಿರುಳು ಹೇಳುತ್ತ ಬಂದಿರುವಿರಿ-ನಾನೇನೊ ಒಂದೆ ಸ್ಥಳಕ್ಕೆ ತಳವೂರಿರತಕ್ಕವಳಲ್ಲನಂತೆ, ಈ ಚಳಿಗಾಲವನ್ನಾದರೂ ಪೀಟರ್ಸ್‌ಬರ್ಗಿನಲ್ಲಿಯೆ ಕಳೆಯಬೇಕಂತೆ. ಪೀಟರ್ಸ್‌ಬರ್ಗ ಎಂದರೆ ನನಗಾಗುವುದಿಲ್ಲ—” ನಾನೆಂದೆ;

“ ನನ್ನನ್ನು ಸಾವರಿಸುವುದನ್ನು ಬಿಟ್ಟು—ನೀವು ಸ್ಪಷ್ಟ ಮಾತಾಡುವುದನ್ನೆ ಬಿಟ್ಟಿರುವಿರಿ—ಒಂದೆ ಒಂದು ಸರಳತನದ ಪ್ರೀತಿಯ ಮಾತು ಬಾಯಿಂದ ಬಂದೀತೆಂದರೆ ಇಟ್ಟ ಆಣೆ. ಒಮ್ಮೆ ನನ್ನ ದುರ್ದಶೆಯಾದ ಮೇಲೆ ಹೀಯಳಿಸುವವರು ನೀವು—ಅದರಲ್ಲಿಯೆ ನಿಮಗಾನಂದ ! ”

“ ತಡೆ! ” ಅವರು ತೀಕ್ಷ್ಣ ಸ್ವರದಿಂದ ನುಡಿದರು; “ ಹಾಗೆನ್ನಲಿಕ್ಕೆ ನಿನಗೆ ಅಧಿಕಾರವಿಲ್ಲ. ಇದರಿಂದಿಷ್ಟೆ ಸಿದ್ಧವಾಗುವುದು—ನನ್ನ ಬಗೆಗೆ ನಿನ್ನ ಅಭಿಪ್ರಾಯ ಚೆನ್ನಾಗಿಲ್ಲ—ನೀನು ನನ್ನನ್ನು —”

“ ನಾನು ನಿಮ್ಮನ್ನು ಪ್ರೀತಿಸುವುದಿಲ್ಲ? ಹಾಗೆನ್ನುವುದಕ್ಕೆ ಹಿಂಜರಿಯಬೇಡಿರಿ. ” ನಾನು ಕಿರಿಚಿದೆ—ಕಂಬನಿಗಳು ತುಂಬಿ ಹರಿಯಲಾರಂಭಿಸಿದುವು. ನಾನು ಬೆಂಚಿನ ಮೇಲೆ ಕುಳಿತು ಕರವಸ್ತ್ರದಲ್ಲಿ ಮೋರೆ ಮುಚ್ಚಿಕೊಂಡೆ.

“ ಅಂತೂ ಹೀಗೆ ತಿಳಿದುಕೊಂಡಿರುವರು ನಾನೆಂದರೆ, ” ನನ್ನನ್ನು ಸಿರುಗಟ್ಟುವ ಅಳುವನ್ನು ನಿಲ್ಲಿಸಲು ಯತ್ನಿಸುತ್ತ ನಾನು ಯೋಚಿಸಿದೆ; ” ಹೋಯಿತು—ಆ ಹಿಂದಿನ ಪ್ರೀತಿ ಅಳಿದು ಹೋಯಿತು! “ ನನ್ನ ಹೃದಯದಲ್ಲಿ ಒಂದು ದನಿ ನುಡಿಯಿತು. ಅವರು ಹತ್ತಿರ ಬರಲಿಲ್ಲ—ನನ್ನನ್ನು ಸಮಾಧಾನಗೊಳಿಸಲಿಲ್ಲ. ನನ್ನ ಮಾತಿನಿಂದ ಅವರು ನೊಂದುಕೊಂಡಿದ್ದರು. ಅವರು ಮಾತನಾಡಿದರು–ಅವರ ದನಿ ನಿಚ್ಚಳವಾದರೂ ಸ್ನೇಹಶೂನ್ಯವಾಗಿತ್ತು.

“ ನೀನು ನನಗೆ ತಪ್ಪು ಹೊರಿಸುವುದೇಕೆ ತಿಳಿಯದು. ” ಅವರು ಹೇಳಲಾರಂಭಿಸಿದರು; “ ಹಿಂದಕ್ಕೊಮ್ಮೆ ಪ್ರೀತಿಸುತ್ತಿದ್ದಂತೆ ಈ ಪ್ರೀತಿಸುವುದಿಲ್ಲವೆಂಬುದೆ ನಿನ್ನ ಮಾತಿನ ಅರ್ಥ—''

“ ಪ್ರೀತಿಸುತ್ತಿದ್ದಂತೆ? ” ನಾನೆಂದೆ—ನನ್ನ ಮೋರೆ ಕರವಸ್ತ್ರದಲ್ಲಿ ಮುಸುಕಿತ್ತು—ಕಂಬನಿಗಳು ಧಾರೆಯಾಗಿ ಸುರಿಯುತ್ತಿದ್ದುವು.

" ಹಾಗಾಗಿದ್ದರೆ ಕಾಲ ಮಹಿಮೆಯೆಂದೆನ್ನಬೇಕು—ನಮ್ಮದೆ ತಪ್ಪೆಂದೆನ್ನಬೇಕು. ಬೇರೆ ಬೇರೆ ಕಾಲಕ್ಕೆ ಪ್ರೀತಿಯ ರೀತಿ ಬೇರೆ ಬೇರೆ. " ಅವರು ತುಸು ಹೊತ್ತು ಸುಮ್ಮನಿದ್ದರು. " ಸ್ಪಷ್ಟವಾಗಿ ಹೇಳಬಹುದಾದರೆ ನೈಜವನ್ನು ಹೇಳುವೆನು. ಆ ಬೇಸಿಗೆಯಲ್ಲಿ ನಿನ್ನ ಪರಿಚಯವಾದಾಗ ನಾನು ನಿನ್ನನ್ನೆ ಧ್ಯಾನಿಸುತ್ತ ಇಡಿ ರಾತ್ರಿ ಎಚ್ಚತ್ತು ಕಳೆಯುತ್ತಿದ್ದೆ—ಆಗ ನಾನೆ ಪ್ರೀತಿಗೆ ಅನುವು ಮಾಡಿಕೊಟ್ಟೆ—ಅದೂ ದಿನ ದಿನಕ್ಕೆ ಬೆಳೆಯುತ್ತ ನಡೆಯಿತು, ನನ್ನ ಹೃದಯದಲ್ಲಿ. ಮುಂದೆ ಪೀಟರ್ಸ್‌ಬರ್ಗಿನಲ್ಲಿ, ಪರದೇಶದಲ್ಲಿ ಆ ನಿದ್ರೆಗೆಟ್ಟ ಕಾಳ ರಾತ್ರಿಗಳಲ್ಲಿ ಆ ನನ್ನನ್ನು ಕಂದಿಸುವ ಕುದಿಸುವ ಪ್ರೀತಿಯನ್ನು ಅಳಿಸಬೇಕು—ನಾಶಗೊಳಿಸಬೇಕೆಂದು ಮಾಡಿದೆ. ನಾನದನ್ನು ಪೂರ್ಣ ನಾಶಗೊಳಿಸಲಿಲ್ಲ—ನನ್ನನ್ನು ಕಂದಿಸುವ ಅಂಶವನ್ನಷ್ಟು ನಾಶಗೊಳಿಸಿದೆ. ಆಗ ನಾನು ಶಾಂತನಾದೆ ನನ್ನಲ್ಲಿ ಈಗಲೂ ಪ್ರೀತಿಯಿದೆ—ಆ ಪ್ರೀತಿಯ ರೀತಿ ಬೇರೆ. "

" ನೀವದಕ್ಕೆ ಪ್ರೀತಿಯೆಂದೆನ್ನುವಿರಿ—ನನಗದು ಕುದಿ. " ನಾನೆಂದೆ, " ನನ್ನನ್ನು ನಾಲ್ಕು ಜನರಲ್ಲಿ ಹೋಗಗೊಟ್ಟರೇಕೆ? ನಿಮಗದು ಇಷ್ಟವಿಲ್ಲದಿದ್ದರೆ—ಅದಕ್ಕಾಗಿಯೆ ನೀವು ನನ್ನನ್ನು ಪ್ರೀತಿಸುವುದನ್ನು ಬಿಟ್ಟಿದ್ದರೆ—

" ಅದೇನಿಲ್ಲ—ನಾಲ್ಕು ಜನ ಏನು ಮಾಡೀತು? " ಅವರೆಂದರು.

" ನಿಮ್ಮ ಅಧಿಕಾರವನ್ನೇಕೆ ನಡಿಸಲಿಲ್ಲ. " ನಾನು ಮುಂದೆ ನುಡಿದೆ; " ನನ್ನನ್ನು ಬೀಗ ಹಾಕಿ ಇಡಲಿಲ್ಲವೇಕೆ? ನನ್ನನ್ನು ಕೊಂದು ಬಿಡಲಿಲ್ಲವೇಕೆ? ಸುಖವೆಂಬುದನ್ನು ಕಳೆದುಕೊಂಡು ಬಾಳುವುದಕ್ಕಿಂತ ಅದೆಷ್ಟೊ ಲೇಸು ನಾನು ಸುಖಿಯಾಗಿರುತ್ತಿದ್ದೆ—ಈ ನಾಚಿಕೆಗೇಡುತನವಾದರೂ ತಪ್ಪುತ್ತಿತು. "

ನಾನು ಬಿಕ್ಕಿ ಬಿಕ್ಕಿ ಅಳತೊಡಗಿ ಮೋರೆ ಮುಚ್ಚಿಕೊಂಡೆ

ಆಗ ಕಾಟ್ಯಾ ಮತ್ತು ಸೋನ್ಯಾ ತೊಯ್ಸಿಕೊಂಡು ಮೋಜು ಮಾಡುತ್ತ ವ್ಹರಾಂಡಕ್ಕೆ ಬಂದರು—ನಗೆಯಾಡುತಿದ್ದರೇನು, ದೊಡ್ಡ ದನಿಯಿಂದ ಕೆಲೆಯುತ್ತಿದ್ದರೇನು—ನಮ್ಮನ್ನು ನೋಡಿದ ತತ್‌ಕ್ಷಣ ಸುಮ್ಮನಾಗಿ ಒಳಗೆ ನಡೆದರು.

ನಾವು ಎಷ್ಟೊ ಹೊತ್ತು ಸುಮ್ಮನೆ ಕುಳಿತಿದ್ದೆವು. ನಾನು ಅಳುವುದು ಕರೆಯುವುದನ್ನೆಲ್ಲ ಮುಗಿಸಿ ಈಗ ಶಾಂತಳಾಗಿದ್ದೆ. ನಾನವರೆಡೆಗೆ ನೋಡಿದೆ. ಅವರು ಕೈಮೇಲೆ ತಲೆಯೂರಿ ಕುಳಿತಿದ್ದರು. ನಾನು ಎಸೆದ ನೋಟಕ್ಕೆ ಉತ್ತರ ಕೊಡಬೇಕೆಂದು ಮಾಡಿದರು—ಆದರೆ ಒಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು ಮತ್ತೆ ಮೊದಲಿನಂತೆ ಕುಳಿತರು.

ನಾನವರೆಡೆಗೆ ಹೋಗಿ ಅವರ ಮೋರೆಯಮೇಲಿನ ಕೈ ತೆಗೆದೆ. ವಿಚಾರ ಮಗ್ನವಾದ ಅವರ ಕಣ್ಣುಗಳು ನನ್ನ ಮೋರೆಗೆ ತಿರುಗಿದುವು.

"ಅಹುದು," ಅವರು ಏನೊ ತಮ್ಮ ವಿಚಾರಗಳನ್ನಾಡಿ ತೋರಿಸಿದಂತೆ ನುಡಿದರು; "ನಮ್ಮೆಲ್ಲರಿಗೆ, ವಿಶೇಷವಾಗಿ ಹೆಂಗಸರಿಗೆ, ಪೋಕರಿತನವೇನೆಂಬುದರ ಪ್ರತ್ಯಕ್ಷ ಅನುಭವ ದೊರೆತರೆ ಜೀವನದ ನಿತ್ಯ ಕ್ರಮಕ್ಕೆ ಅಂಟುಕೊಳ್ಳಲನುವಾಗುವುದು. ಹೆರವರ ಅನುಭವದ ಮಾತು ಸಾಲದು. ಆಗ ನಿನ್ನಲ್ಲಿಯ ಆ ಪೋಕರಿತನ—ನಿನ್ನನ್ನು ನೋಡಿ ಒಳ್ಳೆಯ ಕೌತುಕವೆನಿಸುತ್ತಿತ್ತು!—ಇನ್ನೂ ಹೋಗಿರಲಿಲ್ಲ. ಅದಕ್ಕಾಗಿಯೆ ನಿನ್ನೊಬ್ಬಳನ್ನೆ ಮುಂದೆ ಹೋಗಗೊಟ್ಟೆ—ನಿನ್ನ ಮೇಲೆ ಒತ್ತಾಯ ಮಾಡಲು ನನಗಧಿಕಾರವಿಲ್ಲವೆಂದೆನಿಸಿತು—ನಾನು ಪೋಕರಿತನ ಮಾಡುವುದಕ್ಕೆ ವಯಸು ಮೀರಿ ಹೋಗಿತ್ತು"

"ನನ್ನ ಮೇಲೆ ನಿಮ್ಮ ಪ್ರೀತಿಯಿದ್ದದ್ದೆ ನಿಜವಿದ್ದರೆ, ನೀವೆ ನಿಂತುಕೊಂಡು ಮಾಡಿದ್ದು ಮಾಡಲೆಂದು ಹೇಗೆಂದಿರಿ!" ನಾನು ಕೇಳಿದೆ.

"ನೀನು ಎಷ್ಟೆ ಪ್ರಯತ್ನ ಪಟ್ಟಿದ್ದರೂ ನನ್ನ ಮಾತಿನಲ್ಲಿ ನಿನ್ನ ನಂಬಿಕೆಯಾಗುವುದು ಸಾಧ್ಯವಿರಲಿಲ್ಲ. ಸ್ವಂತದ ಅನುಭವ ಬೇಕಿತ್ತು—ಅದು ನಿನಗೆ ಸಿಕ್ಕಂತಾಯಿತು."

"ಇದೆಲ್ಲದರಲ್ಲಿ ಲೆಕ್ಕವಿತ್ತು ಪ್ರೀತಿಯ ಅಂಶಕೂಡ ಇರಲಿಲ್ಲ." ನಾನೆಂದೆ.

ನಾವು ಮತ್ತೆ ಸುಮ್ಮನೆ ಕುಳಿತೆವು.

"ಇದೀಗ ನೀನೆಂದಿದ್ದರಲ್ಲಿ ಕಟುತನವಿದ್ದರೂ ಸತ್ಯಾರ್ಥವಿದೆ." ಅವರು ಎದ್ದು ಓಡಾಡ ತೊಡಗಿದರು. "ಅಹುದು, ಸತ್ಯಾರ್ಥವಿದೆ-ತಪ್ಪು ನನ್ನದು."

ನನ್ನೆದುರಿಗೆ ನಿಂತು ನುಡಿದರು." ನಿನ್ನನ್ನು ಪ್ರೀತಿಸುವ ಗೋಜಿಗೆ ಹೋಗ ಬಾರದಾಗಿತ್ತು ಇಲ್ಲವೆ ನಿನ್ನನ್ನು ಪ್ರೀತಿಸುವ ರೀತಿಯಲ್ಲಿ ಸಹಜತೆಯಿರ ಬೇಕಿತ್ತು."

"ಮರೆತು ಬಿಡೋಣ ಎಲ್ಲವನ್ನು." ನಾನು ಕಾತರದಿಂದ ನುಡಿದೆ.

"ಊಂ ಹೂಂ!—ಕೈ ಬಿಟ್ಟು ಹೋದುದು ಮರಳಿ ಬರಲಾರದು. ಎಂದೂ ಬರಲಾರದು." ಅವರು ಮಿದುವಾಗಿ ನುಡಿದರು.

"ಮರಳಿ ಬಂದೆ ಇದೆ." ಅವರ ಹೆಗಲ ಮೇಲೆ ಕೈಯಿಟ್ಟು ನಾನಂದೆ.

ಅವರು ನನ್ನ ಕೈ ತಮ್ಮ ಕೈಯಲ್ಲಿ ತೆಗೆದುಕೊಂಡು ಮಿದ್ದಿದರು.

"ಆಗಿ ಹೋದುದಕ್ಕೆ ನಾನು ಮರಗುವುದಿಲ್ಲವೆಂದೆನಲ್ಲ, ಅದು ತಪ್ಪು. ನಾನು ಮರಗುತ್ತಿರುವುದು ನಿಜ. ಮರಳಿ ಬಾರದ ಆ ಪ್ರೀತಿಗಾಗಿ ನಾನು ದುಃಖಿಸುತ್ತೇನೆ. ತಪ್ಪು ಯಾರದೆಂಬುದನ್ನು ನಾನರಿಯೆ. ಈಗ ಪ್ರೀತಿ ಯೆಂಬುದಿದೆ, ಆದರೆ ಆ ಹಿಂದಿನ ಪ್ರೀತಿಯಲ್ಲ ಅದರ ಸ್ಥಾನವಿದೆ—ಬರಡು ಬಯಲಾಗಿ, ಬಲವಿಲ್ಲದೆ, ಸಾರವಿಲ್ಲದೆ ಉಳಿದಿದೆ."

"ಹಾಗೆನ್ನ ಬೇಡಿರಿ!" ನಾನು ಬಾಯಿ ಹಾಕಿದೆ; "ಎಲ್ಲವೂ ಮೊದಲಿ ಗಿದ್ದಕ್ಕಿಂದಂತೆ ಆಗಿರಲಿ! ಅದು ಸಾಧ್ಯವಿದೆ. ಅಲ್ಲವೆ?" ನಾನು ಅವರ ಕಣ್ಣೆಡೆಗೆ ನೇರವಾಗಿ ನೋಡಿದೆ. ಆ ನೋಟದಲ್ಲಿ ಶಾಂತತೆಯಿತ್ತು—ಸೌಮ್ಯತೆ ಯಿತ್ತು—ಅಲ್ಲಿ ಮೂಡಿದ ನಗು ಮಾತ್ರ ವೃಥ್ಯಾಸ್ಯವನ್ನು ಸೂಚಿಸುತ್ತಿತ್ತು.

"ನೀನಿನ್ನೂ ಎಷ್ಟು ಎಳೆತನದಲ್ಲಿರುವಿ!" ಅವರೆಂದರು; "ನಾನು ಮುದುಕನಾಗಿರುವೆ. ನನ್ನಿಂದ ನಿನ್ನ ಬಯಕೆ ಹಿಂಗದು. ಒಬ್ಬರನೊಬ್ಬರು ಮೋಸ ಮಾಡಿ ಫಲವೇನು?" ಅವರು ಹಾಗೇ ನಗುತ್ತ ನುಡಿದರು.

ನಾನವರೆದುರಿಗೆ ಸುಮ್ಮನೆ ನಿಂತಿದ್ದೆ—ನನ್ನ ಮನಸು ಶಾಂತವಾಗಿತ್ತು.

"ಮಾಡಿದುದನ್ನೆ ಆಡಿದುದನ್ನೆ ಮಾಡುವುದು ಬೇಡ—ಆಡುವುದು ಬೇಡ—"ಅವರು ನುಡಿದರು;" ನಮ್ಮನ್ನು ನಾವೆ ಮೋಸಗೊಳಿಸುವುದೂ

ಬೇಡ. ಆ ಹಿಂದಿನ ಭಾವೋತ್ಕಟತೆಗೆ ಈಗ ಅನುವಿಲ್ಲದುದಕ್ಕೆ ಉಪಕಾರ ವಾಯಿತೆಂದು ತಿಳಿಯೋಣ. ಏನೊ ಒಂದು ಹುಡುಕುತ್ತ ಸಾಗುವುದು ತೀರಿ ತಿನ್ನು—ನಮ್ಮ ಮಟ್ಟು ಮುಟ್ಟಿದಂತಾಯಿತು. ಇನ್ನು ನಾವು ಸರಿದು ನಿಂತು ದಾರಿ ಕೊಡಬೇಕು—ಇತನಿಗೆ ಎಂದೆನ್ನೋಣ—" ಎಂದೆನುತ್ತ,—ದಾದಿ ಘಾನ್ಯ್ಯಾನನ್ನು ಹೊರಗೆ ಕರಕೊಂಡು ನಡೆದಿದ್ದಳು—ಆತನ ಕಡೆಗೆ ಬೊಟ್ಟು ಮಾಡಿ ತೋರಿಸಿದರು-ದಾದಿ ವ್ಹರಾಂಡದ ಬಾಗಿಲಲ್ಲಿ ನಿಂತಳು. " ಇದೆ ನಿಜ." ಎಂದೆನ್ನುತ್ತ ನನ್ನ ತಲೆ ತಮ್ಮೆಡೆಗೆಳೆದು ಮುತ್ತಿಟ್ಟರು—ಪ್ರಿಯಕರನಂತೆ ಅಲ್ಲ, ಒಬ್ಬ ಹಳೆಯ ಸ್ನೇಹಿತನಂತೆ.

ಆ ಮಲಮಲ ರಾತ್ರಿಯಲ್ಲಿ ತೋಟದಲ್ಲಿಡುಗಿದ ಸುವಾಸನೆ ದುಮುಕ ತೊಡಗಿತು. ಸುತ್ತ ಕೇಳುವ ಸಪ್ಪಳ—ಸ್ತಬ್ಧತೆ ಎರಡೂ ಗಂಭೀರವಾಗಿ ದ್ದುವು. ಚುಕ್ಕೆಗಳು ಒಂದರ ಹಿಂದೊಂದು ಇಣಿಕಿ ನೋಡ ತೊಡಗಿದುವು. ನಾನವರೆಡೆಗೆ ನೋಡಿದೆ—ನನ್ನ ಹೃದಯವು ಒಮ್ಮಿಂದೊಮ್ಮೆಲೆ ಹಗುರಾ ದಂತೆನಿಸಿತು. ನನ್ನ ದುಃಖದ ಕಾರಣವೆ ಇಲ್ಲದಾದಂತೆನಿಸಿತು—ಎಲ್ಲ ಅಳುಕಿ ನೋವನ್ನುಂಟು ಮಾಡುತ್ತಿರುವ ಒಂದು ಕುರ ಒಡೆದಂತೆನಿಸಿತು— ಆ ಹಿಂದಿನ ಕಾಲದಂತೆ ಆಗಿನ ಭಾವಭಾವನೆಗಳನ್ನು ನಿಚ್ಚಳವಾಗಿ ಶಾಂತ ವಾಗಿ ಪರಿಕಿಸಿ ನೋಡಿದೆ—ಆ ಹಿಂದಿನ ಕಾಲ ಕರೆದರೂ ಬಾರದಂತಿತ್ತು— ತಿರುಗಿ ತರಬೇಕೆಂದರೂ ಅದೊಂದು ದುಃಖ—ಅಸಮಾನಗಳಿಗೆ ಅನುವು ಕೊಟ್ಟಂತಿತ್ತು. ನಾನು ಸುಖದ ಕಾಲವೆಂದು ಹೇಳಿಕೊಳ್ಳುವ ಆ ಕಾಲ ನಿಜ ವಾಗಿಯೂ ಅಷ್ಟು ಸುಖಮಯವಾಗಿತ್ತೆ ? ಮೇಲಾಗಿ ಅದೆಂದಿನ ಮಾತೊ !

"ಚಹಾದ ವೇಳೆಯಾಯಿತು." ಅವರೆಂದರು. ನಾವು ನಡುಮನೆಗೆ ನಡೆದೆವು. ಬಾಗಿಲಿಗೆ ಕೂಸನ್ನು ಕರಕೊಂಡು ನಿಂತ ದಾದಿ ಕಂಡಳು. ನಾನ ದನ್ನವಚಿಕೊಂಡೆ, ಹೊರಬಿದ್ದ ಕಾಲುಗಳನ್ನು ಹೊದಿಸಿದೆ, ಮತ್ತೊಮ್ಮೆ ಅವಚಿ ಕೊಂಡು ಮೃದುವಾಗಿ ಮುತ್ತಿಟ್ಟೆ. ಅರೆ ನಿದ್ರೆಯಲ್ಲಿದ್ದ ಆ ಕೂಸು ಮುಟಿಗೆ ಮಾಡಿ ಹಿಡಿದ ತನ್ನ ಕೈ ಬೆರಳುಗಳನ್ನು ಚ್ಚಿ ಮುಂದೆ ಚಾಚಿತು—ಅರೆಗಣ್ಣು ತೆರೆಯಿತು—ಏನನ್ನೊ ಹುಡುಕುತ್ತಿರುವಂತೆ, ಏನನ್ನೊ ನೆನಪು ಮಾಡಿ

ಕೊಂಡಂತೆ—ಆ ಕಣ್ಣುಗಳು ನನ್ನಲ್ಲಿ ನೆಟ್ಟುವು. ಏನೋ ಒಂದು ಅರಿವು ಹೊಳೆದಂತಾಯಿತು —ಇದುವರೆಗೆ ಮುದುಡಿಕೊಂಡ ತುಟಿಗಳು ಅರಳಿ ಅಲ್ಲಿ ಮರುಳಿ ಮೂಡಿದವು. "ನನ್ನ ಕಂದ! ನನ್ನ ಅಂದ! ನನ್ನ ಚೆಂದ!" ಎಂದು ಕೂಸನ್ನು ಉಸುಲುಗಟ್ಟುವ ಅರಿವಿಲ್ಲವೆ ಅವಚಿಕೊಂಡೆ. ಆ ಹೊದಿಕೆಯಲ್ಲಿ ಮುಸುಕಿಟ್ಟ ತಂಪು, ಮಾಟ ಕಾಲುಗಳನ್ನೊ, ಕೈಗಳನ್ನೊ, ತಲೆಯನ್ನೊ, ಹೊಟ್ಟೆಯನ್ನೊ ಹಾಗೇ ಮುತ್ತಿಡುತ್ತ ನಡೆದೆ. ಅವರು ನನ್ನ ಹತ್ತಿರ ಬಂದರು. ನಾನು ಕೂಸಿನ ಮೇಲೆ ಮುಸುಕು ಹಾಕಿ ಮತ್ತೆ ತೆಗೆದೆ.

"ಇಫಾನ್ ಸರ್ಜಿಷ್!" ಅವರು ಕೂಸಿಗೆ ಕಟ್ಟೆಯಾಡಿಸುತ್ತ ನುಡಿದರು. ನಾನು ಇಫಾನ್ ಸರ್ಜಿಷ್‌ನ ಮೇಲೆ ಮತ್ತೆ ಮುಸುಕು ಹಾಕಿದೆ. ಆತನೆಡೆಗೆ ನೋಡುವ ಅಧಿಕಾರ ನನ್ನದು. ನಾನವರೆಡೆಗೆ ನೋಡಿದೆ. ಅವರು ನನ್ನೆಡೆಗೆ ನೋಡಿದಾಗ ಅವರ ಕಣ್ಣುಗಳು ನಗುತ್ತಿದ್ದುವು. ನಾನು ತಿರುಗಿ ಆ ಕಣ್ಣುಗಳಲ್ಲಿ ನನ್ನ ನೋಟ ನೆಟ್ಟಿಸಿ ನೋಡಿದಾಗ ನನಗೆ ಎಂದೂ ಕಾಣದ ಸುಖ ಸಮಾಧಾನ ದೊರೆತಂತಾಯಿತು.

ಆ ದಿನ ನಮ್ಮ ಮದುವೆಯ ಅದ್ಭುತಕತೆ ಮುಗಿಯಿತು. ಆ ಹಳೆಯ ಭಾವ ಭಾವನೆಗಳು ಹಳೆಯ ನೆನಪುಗಳಾದುವು. ನನ್ನ ಮಕ್ಕಳಿಗಾಗಿ ಆ ಮಕ್ಕಳನ್ನು ಹೆತ್ತವರಿಗಾಗಿ ಹೊಸ ಭಾವನೆಯನ್ನು ಹುಟ್ಟಿಸಿ ಹೊಸ ಸುಖದ ಹೊಸ ಜಗತ್ತನ್ನು ಮುಂದಿಡುವ ತಳಹದಿಯನ್ನು ಕಂಡೆ. ಆ ಜಗತ್ತು, ಆ ಸುಖ ಇದುವರೆಗೆಉಳಿದಿವೆ.

---